॥ ಶ್ರೀ ಶೈಲ ಮಲ್ಲಿಕಾರ್ಜುನ ಪ್ರಸನ್ನ ॥

# ಪ್ರದೀಪನ ಪರಾಭವ

(ಮನೋಹ್ಲಾದಕ ಪತ್ತೇದಾರಿ ಕಾದಂಬರಿ)

ಪುರುಷೋತ್ತಮನ ನಲವತ್ತೇಳನೆಯ ಸಾಹಸ

ಲೇಖಕರು :

ಎನ್. ನರಸಿಂಹಯ್ಯ

ಪ್ರಕಾಶಕರು :

ರಾಜಕಮಲ್ ಪ್ರಕಾಶನ,

೧೧೯, ಬಳೇಪೇಟೆ, ಬೆಂಗಳೂರು ೨.

## ಲೇಖಕನ ಮಾತು

ಈ ಕಾದಂಬರಿಯು ಕಥಾಸಾರವು ನನ್ನ ಹಿಂದಿನ ಕಥೆಗಳ ಮಾದರಿಯಲ್ಲಿಲ್ಲದೆ, ನವೀನ ರೀತಿಯ ಸಾಹಸವನ್ನೊಳಗೊಂಡಿದೆ.

ಕಳ್ಳರು, ಕೊಲೆಗಾರರು, ದರೋಡೆಕೋರರನ್ನು ಹಲವು ಬಗೆಯ ಯುಕ್ತಿ, ಚತುರತೆಗಳಿಂದ ಕೈಸೆರೆ ಹಿಡಿಯುವ ಪತ್ತೇದಾರರು ಈ ಕಾದಂಬರಿಯಲ್ಲಿ ತಾವೊಂದು ಹೊಸ ಮಾದರಿಯ ವಿದ್ಯಾಚತುರತೆಯನ್ನು ತೋರಿ, ಅಂತ್ಯದಲ್ಲಿ ತಮ್ಮ ಪ್ರತಿಜ್ಞೆಯನ್ನು ಯಾವ ರೀತಿ ನೆರವೇರಿಸಿ, ಅಜೇಯರಾದರೆಂಬುದನ್ನು ಈ ಕಾದಂಬರಿಯಲ್ಲಿ ಬರೆದಿರುವೆನು.

ತಾನೇ ಹೆಚ್ಚು, ತನ್ನಿಂದಲೇ ಸರ್ವಸ್ವ, ತನ್ನಿಂದಲೇ ಸರ್ವರು, ತನ್ನಿಂದಲೇ ಜಗತ್ತು, ತನ್ನನ್ನು ಬಿಟ್ಟು ಈ ಪ್ರಪಂಚವಿಲ್ಲವೆಂದು ಅಹಂಭಾವದಿಂದ ಮೆರೆಯುವವರಿಗೆ ಈ ಕಾದಂಬರಿಯು ನೀತಿಬೋಧಕವಾಗಿದೆಯೆಂದರೆ ಅತಿಶಯೋಕ್ತಿಯೆನಿಸಲಾರದು.

ದುರಹಂಕಾರದಿಂದ ತನ್ನ ಸಮಾನರಿಲ್ಲವೆಂದು ಮೆರೆಯುತ್ತಿದ್ದ ಇನ್ಸ್ಪೆಕ್ಟರ್ ಪ್ರದೀಪನು ಪತ್ತೇದಾರರೊಡನೆ ಪಂಥಮಾಡಿ, ಅದರ ಪ್ರತಿಫಲವಾಗಿ ಪ್ರತೀಕಾರವನ್ನು ಹೊಂದಿ, ಅಂತ್ಯದಲ್ಲಿ ತನ್ನ ಗರ್ವವನ್ನು ದೂರಮಾಡಿ ಪತ್ತೇದಾರರಿಗೆ ಯಾವ ಬಗೆಯಲ್ಲಿ ಶರಣಾಗತನಾಗುವನೆಂಬುದನ್ನು ಈ ಕಾದಂಬರಿಯು ಸೂಚಿಸುತ್ತದೆ.

ಈ ಕಾದಂಬರಿಯ ಕಥಾಸಾರವು ಜಗತ್ತಿನಲ್ಲಿ ಅಳಿದುಳಿದಿರುವ ಯಾವ ವ್ಯಕ್ತಿಗೂ ಸಂಬಂಧಿಸಿಲ್ಲ. ಯಾರೇ ಆಗಲಿ, ತಮ್ಮನ್ನೇ ಕುರಿತು ಬರೆದುದೆಂದು ಊಹೆ ಮಾಡಿಕೊಳ್ಳಬಾರದು. 'ರವಿ ಕಾಣದುದನ್ನು ಕವಿ ಕಾಣುವನು' ಎಂಬ ಮಹಾನುಭಾವರ ವಚನದಂತೆ ತನ್ನ ವಿವೇಚನಾಶಕ್ತಿಗೆ ಹೊಳೆದುದನ್ನು, ನನ್ನ ಲೇಖನಾ ಶಕ್ತಿಯಿಂದ ಹೊರಗೆಡಹಿರುವೆನು.

ನನ್ನ ಹಿಂದಿನ ಕಾದಂಬರಿಗಳಂತೆಯೇ ಈ ಕಾದಂಬರಿಯೂ ಸಾಹಿತ್ಯ ಪ್ರೇಮಿಗಳ ಆದರಾಭಿಮಾನವನ್ನು ಗಳಿಸುವುದೆಂದು ನಂಬಿರುವೆನಲ್ಲದೆ, ಇದರ

ವಿಮರ್ಶಾವಗಾಹನೆಯನ್ನು ನಿಷ್ಕಲ್ಮಷ ಹೃದಯದ ಓದುಗರ ಚಿತ್ತಕ್ಕೆ ಬಿಟ್ಟಿರುವೆನು.

ಈ ಕಾದಂಬರಿಯನ್ನು ಬರೆದು ಮುಗಿಸಿದನಂತರ, ಹಸ್ತಪ್ರತಿಯನ್ನು ಓದಿ ದೋಷಾರೂಪ ಭಾವನೆಗಳನ್ನು ತಿದ್ದಿ ಸರಿಪಡಿಸಿದ ಶ್ರೀ ಆರ್. ಶ್ರೀನಿವಾಸ ಮೂರ್ತಿಯವರಿಗೆ ಕೃತಜ್ಞತೆಯನ್ನರ್ಪಿಸಿರುವೆನು.

ಈ ಕಾದಂಬರಿಯನ್ನು ತಮ್ಮ ಮಾಲೆಯ ಒಂಭತ್ತನೆಯ ಕುಸುಮ ವನ್ನಾಗಿ ಸ್ವೀಕರಿಸಿ, ಅತಿ ಶೀಘ್ರದಲ್ಲಿಯೇ ಬೆಳಕಿಗೆ ತಂದ ರಾಜಕಮಲ್ ಪ್ರಕಾಶನದವರಿಗೆ ನನ್ನ ವಂದನೆಗಳು ಸಲ್ಲಿವೆ. ಪ್ರಕಾಶನದ ಏಳಿಗೆಗಾಗಿ ಹಲವು ಬಗೆಯ ಯೋಚನಾರೂಪದಲ್ಲಿರುವ ಇವರ ಕಾರ್ಯೋದ್ಯಮವು ಯಶಸ್ವಿ ಯಾಗಲೆಂದು ಹಾರೈಸುವೆನು.

ಈ ಕಾದಂಬರಿಯ ಮುದ್ರಣ ಕಾರ್ಯದಲ್ಲಿ ಹೆಚ್ಚಿನ ಆಸಕ್ತಿ ವಹಿಸಿ ಅಂದವಾಗಿ ಮುದ್ರಿಸಿದ ಶ್ರೀ ಕಾವೇರಿ ಪ್ರೆಸ್ಸಿನ ಬಳಗ ವೃಂದಕ್ಕೂ ನನ್ನ ನೆನಕೆ ಗಳು ಸಲ್ಲಿವೆ:

J, ೨೨, ಮಲ್ಲಿಕಾರ್ಜುನಗುಡಿ ಬೀದಿ,
ಬೆಂಗಳೂರು ೨.

ಲೇಖಕ :
**ಎಚ್. ನರಸಿಂಹಯ್ಯ.**

## ಪ್ರಕಾಶಕರ ಬಿನ್ನಹ

ಈ ಕಾದಂಬರಿಯು ನಮ್ಮ ಮಾಲೆಯ ಒಂಭತ್ತನೆಯ ಕುಸುಮ.

ಕೊಲೆ, ದರೋಡೆಗಳ ಸುಳಿವಿಲ್ಲದೆ, ಅತ್ಯಾಚಾರ, ಆತ್ಮಹತ್ಯೆಗಳಿಗೆ ಎಡೆಗೊಡದೆ, ನೂತನ ಬಗೆಯ ಪತ್ತೇದಾರಿಯ ಚಮತ್ಕಾರವು ಈ ಕಾದಂಬರಿಯಲ್ಲಡಕವಾಗಿದೆ.

ಪ್ರಾರಂಭದಲ್ಲಿ ಬೆಳೆಯುವ ಕಥಾಸರಣಿಯ ಸೊಬಗು, ಮಧ್ಯದಲ್ಲಿ ಓದುಗರ ಮನವನ್ನು ಸೆಳೆಯುವ ಚಿತ್ತಾಕರ್ಷಕ ಘಟನೆ, ಅಂತ್ಯದಲ್ಲಿ ಅತ್ಯಾನಂದದೊಡನೆ ಮುಗಿಯುವ ಸನ್ನಿವೇಶವು ಸಾಹಿತ್ಯಪ್ರೇಮಿಗಳಿಗೆ ಮನೋಹ್ಲಾದಕರವುಂಟುಮಾಡುವುದೆಂದರೆ ಹೊಗಳಿಕೆಯ ಮಾತೆನಿಸದು.

ಕರ್ಣಾಟಕದ ಸಾಹಿತ್ಯಾಭಿಮಾನಿಗಳ ಮನವನ್ನು ಆನಂದಗೊಳಿಸುವ, ಹೃದಯಂಗಮವಾದ ಈ ಕಾದಂಬರಿಯನ್ನು ರಚಿಸಿತ್ತ ಶ್ರೀ ಎನ್. ನರಸಿಂಹಯ್ಯನವರಿಗೆ ಪ್ರಕಾಶನವು ಚಿರಋಣಿಯಾಗಿದೆ.

ಅಂತೆಯೇ ನಮ್ಮ ಪ್ರಕಾಶನದ ಏಳಿಗೆಗಾಗಿ ಹಲವು ಬಗೆಯಲ್ಲಿ ತಮ್ಮ ನೆರವನ್ನಿತ್ತು ಸಹಾಯ ಮಾಡಿದ (ಮಾಡುತ್ತಿರುವ) ಶ್ರೀ ಕಾವೇರಿ ಪ್ರೆಸ್ಸಿನ ಎಂ. ಆರ್. ಸುಬ್ರಮಣ್ಯಂ ರವರಿಗೂ ಪ್ರಕಾಶನದ ಪರವಾಗಿ ವಂದನೆಯನ್ನರ್ಪಿಸಿರುವೆನು.

ನಮ್ಮ ಪ್ರಕಾಶನವು ಹಲವು ಬಗೆಯ ಮನರಂಜನೀಯವಾದ ಕೃತಿರಚನೆಗಳನ್ನು ನೀಡಬೇಕೆಂಬ ಉದ್ದೇಶವಿಟ್ಟುಕೊಂಡಿದೆ. ಪ್ರಕಾಶನಕ್ಕೆ ಯಶಸ್ಸನ್ನು ಬಯಸುವ ಹಿತೈಷಿಗಳಿಂದ ಆ ಉದ್ದೇಶವು ನೆರವೇರುವುದೆಂಬ ಭರವಸೆಯೂ ಪ್ರಕಾಶನಕ್ಕಿದೆ.

ಆ ಹಿತೈಷಿಗಳಿಗೆಲ್ಲಾ ಪ್ರಕಾಶನವು ಚಿರಋಣಿ.

—ಪ್ರಕಾಶಕರು.

## ನಮ್ಮ ಪ್ರಕಾಶನದ ಹಿಂದಿನ ಪ್ರಕಟಣೆಗಳು

| | | | | |
|---|---|---|---|---|
| ವ್ಯಾಘ್ರಮುಖ | ಎನ್. ನರಸಿಂಹಯ್ಯ | 0 | 10 | 0 |
| ಫೋರ್ಜರಿ ಪತ್ರ | ,, | 0 | 10 | 0 |
| ಸಾವಿನ ಸೋಲು | ,, | 1 | 0 | 0 |
| ಮೃತ್ಯುಮಣಿ | ,, | 0 | 10 | 0 |
| ಊರಬಸವಿ (ನವ್ಯ ಕಾದಂಬರಿ) | ವ್ಯೆ. ಸು. ಶೇ. | 0 | 6 | 0 |
| ಓವರ್‌ಕೋಟಿನ ರಹಸ್ಯ | ಎನ್. ಗುಂಡಾಶಾಸ್ತ್ರಿ | 0 | 10 | 0 |
| ವಿಚಿತ್ರ ಕೊಲೆ | ಶ್ರೀ ಕೃಪಾ | 0 | 6 | 0 |
| ದಸ್ಯುದಳ | ಎನ್ ನರಸಿಂಹಯ್ಯ | 1 | 0 | 0 |

## ಮುಂದಿನ ಪ್ರಕಟಣೆಗಳು

ಎನ್. ನರಸಿಂಹಯ್ಯ ವಿರಚಿತ

★ ಮಾರ್ವಾಡಿಯ ಮಾಯ

★ ಕುಂಕುಮದ ಭರಣಿ

★ ಹುಚ್ಚನ ರಹಸ್ಯ

★ ಜೇಡನ ಬಲೆ

★ ಏಳು ದಿನಗಳು

★ ಪ್ರೇತವನದ ಪುಷ್ಪ

ಎನ್. ಗುಂಡಾಶಾಸ್ತ್ರಿಯವರ

★ ಪಕ್ಕಾಕೇಡಿ ★ ಭೂಪತಿರಂಗ

ಪ್ರಕಾಶಕರು :

**ರಾಜಕಮಲ್ ಪ್ರಕಾಶನ,**

೧೦೯, ಬಳೇಪೇಟೆ, ಬೆಂಗಳೂರು ೨.



**ಮುಂದಿನ ಪ್ರಕಟಣೆ**

**ಎಸ್. ಎಲ್. ಗುರುರಾಜಾಚಾರ್ಯರ**

# ಮಡುವಿನಲ್ಲಿ ಮೃತದೇಹ

- ★ ಮಡುವಿನ ಮಧ್ಯೆ ಶವ! ಆ ಮೃತದೇಹ ಯಾರದು ?
- ★ ನ್ಯಾಯಾಧೀಶರ ಮನೆಯಲ್ಲಿ ಸೇವಕನ ಕೊಲೆ!
- ★ ಮೋಟಾರಿನ ಕಳುವು! ಪೋಲೀಸರ ಪತ್ತೆ ತರದೂದು.
- ★ ಅನಾಥ ಬಾಲಕ ಹರಿಯಮೇಲೆ ಮತ್ತೊಂದು ಕೊಲೆಯ ಆಪಾದನೆ! ಅವನ ದಸ್ತಗಿರಿ!!
- ★ ಈ ಮಧ್ಯೆ ಹರಿಯ ತಂದೆಗೆ ಪತ್ತೇದಾರನ ನೆರವು.
- ★ ಹರಿಗೆ ಬಿಡುಗಡೆಯಾಯಿತೇ ? ಅಪರಾಧಿಯು ಸಿಕ್ಕಿದನೇ ?

ಇತ್ಯಾದಿ ಕೊಲೆ, ಅಪರಾಧ ದುಷ್ಕೃತ್ಯಗಳು! ಚೋರರ ಚಾತುರ್ಯಗಳು!
ಚತುರ ಪತ್ತೇದಾರನ ಅಮೋಘವಾದ ಭೀಷಣ ಸಾಹಸಕಾರ್ಯಗಳು!
ಮುಂತಾದ ಆಶ್ಚರ್ಯ ಭಯಂಕರ ಸನ್ನಿವೇಶಗಳಿಂದ ಕೂಡಿದ
ಓದಲು ಆರಂಭಿಸಿದರೆ ಕೊನೆಯವರೆಗೂ ಬಿಡಲು ಮನಸ್ಸು
ಬಾರದಿರುವ ಸ್ವಾರಸ್ಯ ಘಟನೆಗಳಿಂದ ಕೂಡಿದ
ಪತ್ತೇದಾರಿ ಕಾದಂಬರಿ.

ಆಕರ್ಷಕ ದ್ವಿವರ್ಣ ರಕ್ಷಾಕವಚ ಬೆಲೆ : 1·00



**ರಾಜಕಮಲ್ ಪ್ರಕಾಶನ,**

೧೧೯, ಬಳೇಪೇಟೆ, ಬೆಂಗಳೂರು ೨.





**ಶೀಘ್ರದಲ್ಲಿಯೇ ಬೆಳಕಿಗೆ ಬರಲಿದೆ**

**ಎಗ್. ನರಸಿಂಹಯ್ಯನವರ**

# ಮೃತ್ಯುವಿನೊಡನೆ ಹೋರಾಟ

**ಅತ್ಯದ್ಭುತ ಸೋಜಿಗ ಪತ್ತೇದಾರಿ ಕಾದಂಬರಿ**

ಪ್ರಥಮದಲ್ಲಿ ಯೋಚನಾಪರಂಪರೆಯ ಹುಚ್ಚಾಟ, ದಾರಿತಪ್ಪಿ ಘೋರಾರಣ್ಯದಲ್ಲಿ ಅಲೆದಾಟ, ಲಲಿತಾಂಗಿಯ ಲಲ್ಲಾಟ, ಮಾಯಾವಿಯ ಕಣ್ಣುಮುಚ್ಚಾಟ, ವೇಷಧಾರಿಯೊಡನೆ ಕೆಣಕಾಟ, ಗಾಯಗೊಂಡವರ ನರಳಾಟ, ಕಳ್ಳ, ಕೊರಮರ ಹಾರಾಟ, ಪುರುಷದ್ವೇಷಿಯ ಚೆಲ್ಲಾಟ, ಕಂಡಕಂಡವರೊಡನೆ ಹೊಡೆದಾಟ, ಶಿಕ್ಷೆಗೊಳಗಾದವರ ಚೀರಾಟ, ಕುದುರೆಗಳ ನಾಗಾಲೋಟ, ತ್ರಿಲೋಕಸುಂದರಿಯ ಕುಣಿದಾಟ, ದರೋಡೆಕೋರರ ಆರ್ಭಟ, ಪತ್ತೇದಾರರ ವಿಚಿತ್ರ ವಿನೋದದಾಟ, ಅಂತ್ಯದಲ್ಲಿ ಸಾಹಿತ್ಯಪ್ರೇಮಿಗಳಿಗೆ ರಸದೌತಣದೂಟ.

ನಿಮಿಷ, ನಿಮಿಷಕ್ಕೂ ದರೋಡೆಕೋರರು ತೋರುವ ರೋಮಾಂಚಕರ ಸಾಹಸ, ಹೆಜ್ಜೆಹೆಜ್ಜೆಗೂ ಪತ್ತೇದಾರರು ಗಂಡಾಂತರಗಳನ್ನೆದುರಿಸುವ ಭಯಾನಕ ಘಟನೆ.

ಪತ್ತೇದಾರಿಕೆಯ ಇತಿಹಾಸದಲ್ಲಿಯೇ ನೂತನ ಪ್ರಯೋಗ.

**ಅಂದಚೆಂದದ ಆಕರ್ಷಕ ರಕ್ಷಾಕವಚ**

**ಬೆಲೆ:** ೧—೮—೦ ಟ. ಹಾ. ಪ್ರತ್ಯೇಕ



ಪ್ರಕಾಶಕರು:

**ಆರೂಢ ಪ್ರಕಾಶನ,**

ಬೆಂಗಳೂರು ೨.



ಶ್ರೀ ಶೈಲ ಮಲ್ಲಿಕಾರ್ಜುನ ಪ್ರಸನ್ನ

# ಪ್ರದೀಪನ ಪರಾಭವ

## ಪತ್ತೇದಾರಿ ಕಾದಂಬರಿ



೧

ಇನ್ಸ್‌ಪೆಕ್ಟರ್ ಪ್ರದೀಪನನ್ನು ಅರಿಯದ ಸರ್ಕಾರಿ ಅಧಿಕಾರಿಗಳೇ ಜಗದೀಶಪುರದಲ್ಲಿರಲಿಲ್ಲ. ಸರ್ಕಾರಿ ಅಧಿಕಾರಿಗಳು ಮಾತ್ರವೇ ಅಲ್ಲ, ಆ ಪುರ ನಿವಾಸಿಗಳೆಲ್ಲರೂ ಬಲ್ಲವರಾಗಿದ್ದರು. ಸಾಮಾನ್ಯವಾಗಿ ಆತನನ್ನು ನೋಡದವರೇ ವಿರಳರೆನ್ನಬಹುದು. ನೋಡದೆ ಇದ್ದವರೂ ಸಹ ಅವನ ಹೆಸರನ್ನೂ, ಆತನ ಅದ್ಭುತ ಕಾರ್ಯಗಳನ್ನೂ ಕೇಳಿ ತಿಳಿದಿದ್ದರು.

ಅವನ ಮುಖವನ್ನು ಒಂದುಸಾರಿ ನೋಡಿದರೆ ಸಾಕು, ಹತ್ತು ವರ್ಷಗಳಾದರೂ ಮರೆಯಲಾಗದಂತಹ ರೌದ್ರಾಕಾರ ಮುಖ ಮೀಸೆಯು ಪಾಳೇಗಾರರ ಮೀಸೆಯಂತಿತ್ತು. ಸುಮಾರು ಐದೂವರೆ ಅಡಿ ಎತ್ತರವಾದ ಆಜಾನುಬಾಹು. ಎತ್ತರಕ್ಕೆ ತಕ್ಕ ಹಾಗೆ ದಷ್ಟಪುಷ್ಟವಾದ ಶರೀರ.

ಪ್ರದೀಪನು ಯಾವ ಸಮಯದಲ್ಲಿಯೇ ಆಗಲಿ, ಯಾವ ಸ್ಥಳದಲ್ಲಿಯೇ ಆಗಲಿ ನಗೆಯಾಡಿದುದನ್ನು ಯಾರೊಬ್ಬರೂ ಕಾಣರು. ಹಾಸ್ಯರಸ

ಭರಿತವಾದ ಸಿನಿಮಾ, ನಾಟಕಗಳನ್ನು ನೋಡುತ್ತಿರಲಿ, ಆ ಥಿಯೇಟರುಗಳಲ್ಲಿ ಕುಳಿತವರು ಹೊಟ್ಟೆ ಹುಣ್ಣಾಗುವಂತೆ ನಗುತ್ತಿದ್ದರೂ ಸಹ ಪ್ರದೀಪನು ತುಟಿಯಲ್ಲಿಯೂ ಸಹ ನಗೆಯ ಚಿನ್ಹೆಯನ್ನು ತೋರಿಸದೆ ಗಂಭೀರನಾಗಿಯೇ ಕುಳಿತಿರುತ್ತಿದ್ದನು. ಅಂತಹ ಸ್ವಭಾವ ಆತನದು.

ತನ್ನ ಕಾರ್ಯದಲ್ಲಿಯೂ ಸಹ ಅಷ್ಟೇ ಕಟ್ಟುನಿಟ್ಟಾಗಿದ್ದನು. ಮೂರು ಕಾಸು ಲಂಚವನ್ನೂ ತೆಗೆದುಕೊಳ್ಳಲು ಆಸೆ ಪಡುತ್ತಿರಲಿಲ್ಲ. ತನ್ನ ಹಾಗೆಯೇ ನ್ಯಾಯಾ, ನಿಷ್ಠಾವಂತರಾದ ಸರ್ಕಾರಿ ಅಧಿಕಾರಿಗಳನ್ನು ಕಂಡರೆ ಅತ್ಯಂತ ವಿಶ್ವಾಸ ತೋರಿಸುತ್ತಿದ್ದನು. ಲಂಚಕೋರರನ್ನು ಕಂಡರೆ ಸ್ವಲ್ಪ ಮಾತ್ರವೂ ಸಹಿಸುತ್ತಿರಲಿಲ್ಲ. ಎಷ್ಟೋ ಸಾರಿ ಲಂಚಕೋರರನ್ನು ಹಿಡಿದು, ಶಿಕ್ಷೆಗೆ ಗುರಿಮಾಡಿದ್ದನು. ತಪ್ಪು ಮಾಡಿದವರು ಯಾರಾಗಿದ್ದರೂ ಸರಿ, ಅವರನ್ನು ವಿಚಾರಣೆಗೆ ಗುರಿಪಡಿಸದೆ ಇರುತ್ತಿರಲಿಲ್ಲ. ಒಂದುಸಾರಿ ತನ್ನ ಸಮೀಪ ಬಂಧುವನ್ನೇ ವಿಚಾರಣೆಗೆ ಗುರಿಪಡಿಸಲು, ಆತನು ಶಿಕ್ಷೆಯನ್ನು ಅನುಭವಿಸಿ ಜೈಲಿನಿಂದ ಹೊರಗೆ ಬಂದಿದ್ದನು.

ಕಳ್ಳರನ್ನೂ, ಕೊಲೆಗಾರರನ್ನೂ, ದರೋಡೆಕೋರರನ್ನೂ, ಕಪ್ಪು ಮಾರ್ಕೆಟ್ಟಿನವರನ್ನೂ ಹಿಡಿಯುವುದೆಂದರೆ ಪ್ರದೀಪನು ಹಗಲು, ರಾತ್ರಿಗಳೆನ್ನದೆ, ನಿದ್ರಾಹಾರವಿಲ್ಲದೆ ಶ್ರಮಪಡುತ್ತಿದ್ದನು. ಚಿತ್ರವಿಚಿತ್ರವಾದ ವೇಷಗಳನ್ನು ಧರಿಸುತ್ತಿದ್ದನು. ವೇಷಗಳನ್ನು ಧರಿಸುವುದೆಂದರೆ ಅವನಿಗೆ ಏನೋ ಒಂದು ಬಗೆಯ ಆನಂದ. ಸಿ.ಐ.ಡಿ.ಯಂತೆ ಕೆಲಸ ಮಾಡುವುದೆಂದರೆ ಅತ್ಯಂತ ಸಂತೋಷ. ಕಳ್ಳರಲ್ಲಿಯೇ ಸೇರಿಕೊಂಡು, ಅವರಂತೆಯೇ ವರ್ತಿಸಿ, ಅವರ ಮೂಲವನ್ನೆಲ್ಲಾ ಆದ್ಯಂತವಾಗಿ ತಿಳಿದುಕೊಂಡು ಬಳಿಕ ಅವರನ್ನು ಸೆರೆ ಹಿಡಿಯುತ್ತಿದ್ದನು.

ತನ್ನ ಯುಕ್ತಿ, ಸಾಹಸ, ಚತುರತೆಗಳಿಂದ ತಾನು ಇನ್ಸ್‌ಪೆಕ್ಟರ್ ಪದವಿಗೆ ಬಂದಲಾಗಾಯ್ತು ಆವರೆವಿಗೆ ನೂರಾರು ಜನ ಕಳ್ಳ, ದರೋಡೆಕೋರರನ್ನು ಸೆರೆ ಹಿಡಿದು ಹೆಸರು ಗಳಿಸಿದ್ದನು. ತನ್ನ ಕಾರ್ಯಕ್ಕೆ ಬೇರೆಯವರ ಸಹಾಯವನ್ನು ಅಪೇಕ್ಷಿಸುತ್ತಿರಲಿಲ್ಲ. ಹಾಗೊಂದು ವೇಳೆ ಬೇಕಾದಾಗ ಮಾತ್ರ ತನ್ನವರ ಸಹಾಯವನ್ನು ಪಡೆಯುತ್ತಿದ್ದನಲ್ಲದೆ, ಉಳಿದ ವೇಳೆಗಳಲ್ಲಿ ಯಾರ ಸಹಾಯವೂ ಆತನಿಗೆ ಬೇಕಿರಲಿಲ್ಲ.

ಕಪ್ಪು ಮಾರ್ಕೆಟ್ಟಿನ ಶ್ರೀಮಂತರನ್ನು ಮಾಲಿನ ಸಮೇತ ಸೆರೆ ಹಿಡಿದಾಗ ಅವರು ತಾವು ತಪ್ಪಿಸಿಕೊಳ್ಳಲು, ಸಾವಿರಾರು ರೂಪಾಯಿಗಳ ಲಂಚದಾಸೆ ಯನ್ನು ತೋರಿಸಿದರೂ, ಆ ಹಿರಣ್ಯಗರ್ಭಕ್ಕೆ ಮಾರು ಹೋಗದೆ, ಮಾಲು ಮತ್ತು ಹಣದ ಸಮೇತ ಅವರನ್ನು ದಸ್ತಗಿರಿ ಮಾಡಿ, ಅವರ ಮೇಲೆ ಎರಡು ಕೇಸುಗಳನ್ನು ಹಾಕುತ್ತಿದ್ದನು.

ಕಳ್ಳಕೊರಮರಿಗೆ ಪ್ರದೀಪನ ಹೆಸರು ಸಿಂಹಸ್ವಪ್ನವಾಗಿದ್ದಿತು. ಪೋಲೀಸರು ಆತನನ್ನು ಕಂಡರೆ, ಸಿಂಹವನ್ನು ಕಂಡ ನರಿಯಂತೆ ಹೆದರಿ ನಡು ಗುತ್ತಿದ್ದರು.

ವೇಶ್ಯಾಗೃಹಕ್ಕೆ ಹೋಗುವವರನ್ನೆಲ್ಲಾ ಹಿಡಿದು ಪೋಲೀಸ್ ಠಾಣೆಗೆ ಕರೆದುಕೊಂಡು ಹೋಗಿ ಅವರ ಮೈ ಮೂಳೆಗಳೆಲ್ಲಾ ಪುಡಿಪುಡಿಯಾಗುವಂತೆ ಒಡೆದು ಇನ್ನೊಂದು ಸಾರಿ ವೇಶ್ಯೆಯರ ಸಹವಾಸಕ್ಕೆ ಹೋಗದಂತೆ ತಡೆಯು ತ್ತಿದ್ದನು. ವೇಶ್ಯೆಯರಿಗೂ ಶಿಕ್ಷಿಸದೆ ಬಿಡುತ್ತಿರಲಿಲ್ಲ. ವೇಶ್ಯೆಯಾದವಳೇ ಆಗಲಿ, ವೇಶ್ಯಾಮಂದಿರಕ್ಕೆ ಹೋದವರೇ ಆಗಲಿ, ಮತ್ತೆ ತಮ್ಮ ಜನ್ಮದಲ್ಲಿಯೇ ಅಂತಹ ಸಹವಾಸಕ್ಕೆ ಹೋಗಬಾರದೆನ್ನುವಂತೆ ಏಟುಗಳನ್ನು ತಿಂದು ನರಳಿದ್ದರು. ಆತನ ಭಯದಿಂದ ವೇಶ್ಯೆಯರೆಲ್ಲಾ ಜಗದೀಶಪುರವನ್ನು ಬಿಟ್ಟು ದೂರದ ಊರು, ನಗರ, ಗ್ರಾಮಗಳಿಗೆ ಹೊರಟು ಹೋಗಿದ್ದರು. ಕಾಮುಕರು ಹಗಲು, ರಾತ್ರಿಯೆನ್ನದೆ ಪ್ರದೀಪನನ್ನು ಶಪಿಸುತ್ತಿದ್ದರು. ಜಗದೀಶಪುರದಲ್ಲಿ ಒಂದು ವೇಶ್ಯಾಮಂದಿರವನ್ನು ನೋಡಬೇಕೆಂದರೂ ಇರಲಿಲ್ಲ. ಕಾಮುಕರು ಸತೀ ಸೂಳೆಯಂತಹ ಸ್ತ್ರೀಯರಲ್ಲಿ ತಮ್ಮ ಕಾಮವನ್ನು ತೀರಿಸಿಕೊಳ್ಳುತ್ತಿದ್ದರು. ಅಂತಹವರೂ ಸಹ ಕೆಲವು ವೇಳೆ ಈತನ ಕೈಗೆ ಸಿಕ್ಕಿ ಬಿದ್ದು ಮೈಮುರಿಯುವ ವರೆವಿಗೂ ಏಟು ತಿಂದಿದ್ದರು.

ಜೂಜುಕೋರರನ್ನು ಹಿಡಿಯಲು ಪ್ರದೀಪನು ರಾತ್ರಿಯ ವೇಳೆ ಛದ್ಮ ವೇಷದಿಂದ ತಿರುಗುತ್ತಾ, ಜೂಜಾಡುವ ಸ್ಥಳಗಳನ್ನು ಪತ್ತೆಮಾಡಿ, ಹಿಡಿದು ಅವರೆಲ್ಲರನ್ನೂ ಪೋಲೀಸ್ ಠಾಣೆಗೆ ಕರೆದುಕೊಂಡು ಹೋಗಿ ಅವರಾರ ಮೇಲೂ ಕೇಸನ್ನು ಹಾಕದೆ, ಅವರು ಇನ್ನೊಂದು ಸಾರಿ ಜೂಜಿನ ಸಹವಾಸಕ್ಕೆ ಹೋಗ ದಂತೆ ಹೊಡೆದು ಕಳುಹಿಸುತ್ತಿದ್ದನು.

ಕಳ್ಳ, ದರೋಡೆಕೋರರಾದಿಯಾಗಿ ನೀಚವೃತ್ತಿಯವರು ಪ್ರದೀಪನ ಮರಣವನ್ನೇ ಬಯಸುತ್ತಿದ್ದರು. ಅವರುಗಳಲ್ಲನೇಕರು ವೇಷಾಂತರಗಳಿಂದ ಅಲೆಯುತ್ತಾ ಸೇಡು ತೀರಿಸಿಕೊಳ್ಳಲು ಸಮಯನಿರೀಕ್ಷಣೆಯಲ್ಲಿದ್ದರು.

ಪ್ರದೀಪನಿಂದ ಹಿಡಿಯಲ್ಪಟ್ಟು ಶಿಕ್ಷೆಗೆ ಗುರಿಯಾಗಿ ಶಿಕ್ಷೆಯ ಅವಧಿಯನ್ನು ಪೂರೈಸಿಕೊಂಡು ಬಿಡುಗಡೆಯಾದವರು, ರೋಷಭೀಷಣರಾಗಿ ಅವನನ್ನು ಕೊಲ್ಲಲು ಮುಂದರಿದವರಾಗಿ ಎಂದಿಗೆ ತಮ್ಮ ವೈರಿಯನ್ನು ನಿರ್ನಾಮಮಾಡುವೆವೆಂದು ಸಮಯ ಕಾಯುತ್ತಿದ್ದರು.

ಕೊಲ್ಲುವ ದೇವನಿಗಿಂತಲೂ, ಸಂರಕ್ಷಿಸುವ ದೇವದೇವನು ದೊಡ್ಡವನಲ್ಲವೇ ? ಧರ್ಮಕರ್ಮಗಳು ಆತನಿಗೆ ತಿಳಿಯದೇ ?

ಸರ್ಕಾರೀ ಡ್ಯೂಟಿಯಲ್ಲಿಲ್ಲದ ಇತರ ವೇಳೆಗಳಲ್ಲಿ ಆತನು ಸಾಮಾನ್ಯವಾದ ಉಡುಪುಗಳನ್ನು ಧರಿಸುತ್ತಿದ್ದನಲ್ಲದೆ, ಹೆಚ್ಚು ಆಡಂಬರಕ್ಕೆ ಹೋಗುತ್ತಿರಲಿಲ್ಲ.

ಆತನ ಪತ್ನಿಯ ಮೈಮೇಲೂ ಹೆಚ್ಚು ಬೆಲೆಯ ಒಡವೆಗಳೇನೂ ಇರಲಿಲ್ಲ. ಸಾಧಾರಣವಾದ ಸೀರೆಗಳನ್ನೇ ತಂದುಕೊಟ್ಟಿದ್ದನು. ಮಕ್ಕಳಿಬ್ಬರ ಮೈಮೇಲಿದ್ದ ಬಟ್ಟೆಗಳೂ ಸಹ ಸಾಧಾರಣದವುಗಳೇ ಆಗಿದ್ದುವು.

ಸೀರೆ, ಬಟ್ಟೆಗಳು ನಾಲ್ಕಾರು ಕಡೆ ಹರಿದಿದ್ದರೂ, ಅವುಗಳಿಗೆ ತೇಪೆ ಹಾಕಿಕೊಂಡು ಅವುಗಳನ್ನೇ ತೊಟ್ಟುಕೊಳ್ಳುತ್ತಿದ್ದರು.

ಬೆಳಗಾಗುತ್ತಲೇ ಪ್ರದೀಪನು ತಾನೇ ಸ್ವತಃ ಮಾರ್ಕೆಟ್ಟಿಗೆ ಹೋಗಿ ಅಡಿಗೆಗೆ ಬೇಕಾದ ವಸ್ತುಗಳನ್ನು ತಂದುಕೊಟ್ಟು ಬಳಿಕ ಡ್ಯೂಟಿಯ ಮೇಲೆ ಹೋಗುತ್ತಿದ್ದನಲ್ಲದೆ ತನ್ನ ಕಾರ್ಯಗಳನ್ನು ಮತ್ತೆ ಯಾರಿಂದಲೂ ಮಾಡಿಸಿಕೊಳ್ಳುತ್ತಿರಲಿಲ್ಲ.

ತನ್ನ ಪತ್ನಿಯಾದ ಪುಷ್ಪವೇಣಿಗೂ ಸೋಮಾರಿಯಂತೆ ಕಾಲ ಕಳೆದುಕೊಂಡಿರಲು ಆಸ್ಪದ ಕೊಟ್ಟಿರಲಿಲ್ಲ. ಆತನ ಮನೆಯಲ್ಲಿ ಕೊಳಾಯಿ ಇರಲಿಲ್ಲ. ಮನೆಯ ಆವರಣದಲ್ಲೊಂದು ಭಾವಿ ಇತ್ತು. ಆ ಭಾವಿಯಿಂದ ನೀರನ್ನು ಸೇದಿಯೇ ಎಲ್ಲಾ ಕಾರ್ಯಗಳಿಗೂ ಉಪಯೋಗಿಸಬೇಕಿತ್ತು.

ತನ್ನ ಪತ್ನಿಯು ತನಗೆ ಅನುಕೂಲಳಾಗಿರಬೇಕೆಂದೇ ಬಯಸಿ, ನಗರ ನಿವಾಸಿಗಳ ಕನ್ಯೆಯರನ್ನು ಬಯಸದೆ ಚಂಪಾಪುರವೆಂಬ ಗ್ರಾಮದ ಜಮೀನ್ದಾರ

ರಾದ ಶ್ರೀಕಂಠಯ್ಯನವರ ಮಗಳಾದ ಪುಷ್ಪವೇಣಿಯಲ್ಲಿ ಮೋಹಗೊಂಡು ಆಕೆಯನ್ನು ವಿವಾಹವಾಗಿದ್ದನು.

ಶ್ರೀಕಂಠಯ್ಯನವರು ಚಂಪಾಪುರದ ದೊಡ್ಡ ಜಮಿನ್ದಾರರಾಗಿದ್ದರೂ ತನ್ನ ವಿವಾಹವು ಹೆಚ್ಚು ಆಡಂಬರದಿಂದ ನಡೆಯಲು ಪ್ರದೀಪನು ಅವಕಾಶವಿತ್ತಿರಲಿಲ್ಲ. ಪುಷ್ಪವೇಣಿಯು ಪತಿಗೆ ತಕ್ಕವಳಾಗಿಯೇ ಇದ್ದಳು. ಒಂದು ಸಾರಿಯೂ ತನ್ನ ಪತಿಯ ಬಳಿಯಲ್ಲಿ ಒಡವೆಗಳನ್ನು ಯಾಚಿಸಲಿಲ್ಲ. ಒಂದು ಉತ್ತಮವಾದ ಸೀರೆಯನ್ನು ತಂದುಕೊಡೆಂದೂ ಪೀಡಿಸಿರಲಿಲ್ಲ.

ಶ್ರೀಕಂಠಯ್ಯನವರು ಮಗಳಿಗಾಗಿ ಒಡವೆ, ವಸ್ತ್ರಗಳನ್ನು ತಮ್ಮ ಸೇವಕರ ಸಂಗಡ ಕಳುಹಿಸಿದ್ದಕ್ಕೆ, ಪುಷ್ಪವೇಣಿಯು ಪತಿಯಾಜ್ಞೆಯಂತೆ ಅವೆಲ್ಲವನ್ನೂ ನಿರಾಕರಿಸಿ ಹಿಂದಕ್ಕೆ ಕಳುಹಿಸಿದ್ದಳು.

ಚಂಪಾಪುರವು ಜಗದೀಶಪುರದಿಂದ ಇನ್ನೂರು ಮೈಲಿಗಳ ದೂರದಲ್ಲಿತ್ತು. ಆ ಗ್ರಾಮಕ್ಕೆ ರೈಲ್ವೇ ನಿಲ್ದಾಣವಿರಲಿಲ್ಲ. ರಾಜೇಂದ್ರಪುರವೆಂಬ ರೈಲ್ವೇ ನಿಲ್ದಾಣದಲ್ಲಿಳಿದು ಹತ್ತು ಮೈಲಿಗಳ ದೂರ ನಡೆದುಹೋಗಬೇಕಾಗಿತ್ತು. ಅಥವಾ ಎತ್ತಿನಗಾಡಿ, ಮೋಟಾರುಕಾರಿನಲ್ಲಿ ಹೋಗಬೇಕಿತ್ತಲ್ಲದೆ, ಆ ಪುರಕ್ಕೆ ಬಸ್ಸಿನ ಸೌಲಭ್ಯವಿರಲಿಲ್ಲ.

ಟಪಾಲು ಕಛೇರಿ ಇದ್ದರೂ ಪ್ರತಿದಿನವೂ ಡೆಲಿವರಿಯಾಗದೆ ವಾರಕ್ಕೆ ಎರಡು ಸಾರಿ ಮಾತ್ರ ಡೆಲಿವರಿಯಾಗುತ್ತಿತ್ತು.

ಮಗಳೆಂಬ ವ್ಯಾಮೋಹದಿಂದ ಶ್ರೀಕಂಠಯ್ಯನವರೇ ಆಗಲಿ, ಅವರ ಪತ್ನಿಯಾದ ಲಕ್ಷ್ಮಮ್ಮನೇ ಆಗಲಿ ಆಕೆಯನ್ನು ನೋಡಬೇಕೆಂದು ಜಗದೀಶಪುರಕ್ಕೆ ಬಂದರೆ ಪ್ರದೀಪನು ಅವರಿಗಾಗಿ ವಿಶೇಷವಾಗಿ ಸತ್ಕರಿಸುವ ಸಹವಾಸಕ್ಕೆ ಹೋಗದೆ ಪ್ರತಿದಿನದ ವ್ಯವಹಾರದಂತೆಯೇ ನಡೆಸಿಕೊಂಡು ಹೋಗುತ್ತಿದ್ದನು. ಅವರಿಗಾಗಿ ರಜಾ ತೆಗೆದುಕೊಳ್ಳುತ್ತಿರಲಿಲ್ಲ. ತನ್ನ ನಿತ್ಯ ವಿಧಿಯಂತೆಯೇ ಕೆಲಸ ಮಾಡಿಕೊಂಡು ಹೋಗುತ್ತಿದ್ದನು.

ಅಳಿಯನ ಕೀರ್ತಿ, ಪ್ರತಿಷ್ಠೆಗಳನ್ನು ಕೇಳಿದ್ದ ಪ್ರದೀಪನ ಅತ್ತೆಮಾವಂದಿರು ಅವನ ಕಾರ್ಯಗೌರವಕ್ಕೆ ಅತ್ಯಂತ ಸಂತೋಷಪಟ್ಟರೂ ಆಡಂಬರದ ಸುಖಸೌಲಭ್ಯಗಳಿಲ್ಲವಲ್ಲಾ ಎಂದು ಪರಿತಪಿಸುತ್ತಿದ್ದರು.

ಛದ್ಮವೇಷಧಾರಿಯಾಗಿ ಕಳ್ಳ, ಕೊಲೆಗಾರರನ್ನು ಸೆರೆ ಹಿಡಿಯಲು ಅತ್ಯಂತ ಸಂತೋಷ ಪಡುತ್ತಿದ್ದ ಪ್ರದೀಪನು ತನ್ನಂತೆಯೇ ಕಾರ್ಯತತ್ಪರ ರಾಗಿರುವವರನ್ನು ಕಂಡರೆ ಆನಂದ ಪಡುತ್ತಿದ್ದನು. ಅಂತಹವರಿಗೆ ತನ್ನ ಕೈಲಾದ ಸಹಾಯವನ್ನೂ ಮಾಡುತ್ತಿದ್ದನು.

ಪ್ರದೀಪನು ಜಗದೀಶಪುರದಲ್ಲಿ ಇನ್ಸ್‌ಪೆಕ್ಟರನಾಗಿದ್ದ ವೇಳೆಯಲ್ಲಿಯೇ ಪುರುಷೋತ್ತಮನು ಮಹಾಮೇಧಾವಿ, ಚೋರಗ್ರಹಣ ತಂತ್ರ ನಿಪುಣ ಪ್ರಖ್ಯಾತ ಪತ್ತೇದಾರನೆನಿಸಿಕೊಂಡು ಕಾಂಚೀನಗರದಲ್ಲಿ ವಾಸಿಸುತ್ತಿದ್ದನು.

ಪ್ರದೀಪನು ಜಗದೀಶಪುರದ ಆಬಾಲವೃದ್ಧವನಿತೆಯರಿಗೆ ಮಾತ್ರ ಚಿರ ಪರಿಚಿತನಾಗಿದ್ದರೆ ಪುರುಷೋತ್ತಮನ ಹೆಸರು ಭಾರತದೇಶದಲ್ಲಿಯೇ ಹರ ಡಿದ್ದಿತು.

ಪ್ರದೀಪನು ಸರ್ಕಾರಿ ಅಧಿಕಾರಿಯಾದರೆ, ಪುರುಷೋತ್ತಮನು ಸ್ವತಂತ್ರ ಪತ್ತೇದಾರನಾಗಿದ್ದನು.

ಪುರುಷೋತ್ತಮನ ಕೀರ್ತಿ, ಪ್ರತಿಷ್ಠೆಗಳನ್ನು ಕೇಳಿದ್ದ ಪ್ರದೀಪನು ಅವ ನಿಗಿಂತಲೂ ಹೆಚ್ಚು ಪ್ರಖ್ಯಾತಿಯನ್ನು ಪಡೆಯಬೇಕೆಂಬ ಹಂಬಲವುಳ್ಳವ ನಾಗಿದ್ದನು.

ಸರ್ಕಾರಿ ಅಧಿಕಾರಿಗಳಲ್ಲಿ ತನ್ನ ಹಾಗೆ ದಕ್ಷರಾದ ಅಧಿಕಾರಿಗಳಿಲ್ಲ. ಸಾಮಾನ್ಯವಾಗಿ ಎಲ್ಲರೂ ಲಂಚಕ್ಕೆ ಆಸೆ ಪಡುವವರೆ. ತನ್ನಂತೆಯೇ ಎಲ್ಲರೂ ಇದ್ದರೆ ಭಾರತವು ರಾಮರಾಜ್ಯವಾಗುವುದೆಂದು ಭಾವಿಸಿಕೊಂಡನು.

ತಾನು ಇನ್ಸ್‌ಪೆಕ್ಟರ್ ಉದ್ಯೋಗದಲ್ಲಿದ್ದರೂ ತಾನೇ ಎಲ್ಲರಿಗಿಂತಲೂ ಮೇಲಾದವನೆಂಬ ದುರಭಿಮಾನವು ಅವನ ಹೃದಯದಲ್ಲಿ ತುಂಬಿದ್ದಿತು. ತನಗೆ ಮುಂದೆ ಏನಾದರೂ ಐ.ಜಿ.ಪಿ. ಕೆಲಸ ಸಿಕ್ಕಿದರೆ ಕೇವಲ ಆರೇಳು ತಿಂಗಳುಗಳ ಲ್ಲಿಯೇ ಲಂಚಕೋರರನ್ನೆಲ್ಲಾ ನಿರ್ಮೂಲ ಮಾಡಿಬಿಡುವೆನೆಂಬ ಸ್ವಾಭಿಮಾನವು ಆತನಿಗಿದ್ದಿತಲ್ಲದೆ, ಮುಂದೆ ಐ.ಜಿ.ಪಿ. ಆಗಲೂಬಹುದೆಂದು ಹಗಲುಗನಸು ಕಾಣುತ್ತಾ ತನ್ನ ಕಾರ್ಯದಲ್ಲಿ ನಿರತನಾಗಿದ್ದನು.

ಮನುಷ್ಯನಿಗೆ ಗರ್ವವಿದ್ದರೆ ಆ ಗರ್ವವೇ ಅವನನ್ನು ಹಾಳು ಮಾಡುತ್ತದೆ. ಗರ್ವದಿಂದ ನಹುಷನು ಅಜಗರನಾದನು. ದುರ್ಯೋಧನನು ತನ್ನ ಸಮಸ್ತ

ಬಾಂಧವರೊಡನೆ ಹತನಾದನು. ಇನ್ನೂ ಎಷ್ಟೋ ಜನ ರಾಜಾಧಿರಾಜರು ಗರ್ವದಿಂದ ಹಾಳಾಗಿರುವರು.

ಜಗದೀಶಪುರದ ನಿವಾಸಿಗಳಾರ ಬಾಯಲ್ಲಿ ನೋಡಿದರೂ ಪ್ರದೀಪನ ಗುಣಗಾನವೇ ನಡೆಯುತ್ತಲಿದ್ದುದರಿಂದ ಪ್ರದೀಪನು ತನ್ನಂತಹ ನಿಸ್ವಾರ್ಥ ಸೇವಾಪಾರಾಯಣನಾದ ಅಧಿಕಾರಿಯೇ ಇಲ್ಲವೆಂದು ಹೆಮ್ಮೆ ಪಡುತ್ತಿದ್ದನು. ಇನ್ನು ಪುರುಷೋತ್ತಮನೂ ತನ್ನ ಸರಿಸಮಾನನಾಗಲಾರನೆಂಬ ದುರಭಿಪ್ರಾಯವು ಆತನ ಮನದಲ್ಲಿ ಮೂಡಿತು. ಇನ್ನು ಕೆಲವು ದಿನಗಳಲ್ಲಿಯೇ ಅವನಿಗಿಂತಲೂ ಹೆಚ್ಚು ಖ್ಯಾತಿಯು ತನಗೆ ಬರುವುದೆಂದುಕೊಂಡನು.

ಕಾಂಚೀನಗರದ ಇನ್ಸ್‌ಪೆಕ್ಟರ್ ಚಂದ್ರನಾಥನು ಪ್ರದೀಪನಿಗೆ ಹತ್ತಿರದ ಬಂಧುವಾಗಬೇಕು.

ಚಂದ್ರನಾಥನು ಕಾಂಚೀನಗರದಲ್ಲಿ ನಡೆಯುವ ಕಳ್ಳತನ, ಕೊಲೆಗಳ ಕಾರ್ಯಕ್ಕೆ ಪ್ರವೇಶಿಸುತ್ತಲೇ ಇರಲಿಲ್ಲ. ಪುರುಷೋತ್ತಮನಿರುವವರೆವಿಗೂ ಅದರ ಬಗ್ಗೆ ಆತನಿಗೆ ಯೋಚನೆಯೇ ಇಲ್ಲದೆ, ಆತನು ಎಂದಿನಂತೆ ನಿಶ್ಚಿಂತನಾಗಿಯೇ ಇರುತ್ತಿದ್ದನು.

ಕಳ್ಳ, ಕೊಲೆಗಾರರನ್ನು ಪತ್ತೇಮಾಡಿ ಹಿಡಿಯಲು ಚಂದ್ರನಾಥನು ಶ್ರಮ ವಹಿಸದೆ ಇದ್ದುದರಿಂದ ಆತನು ಸೋಮಾರಿಗಳಲ್ಲಿ ಪ್ರಥಮ ಸೋಮಾರಿಯೆಂತಲೂ, ಪುರುಷೋತ್ತಮನು ಆ ನಗರದಲ್ಲಿರುವುದರಿಂದ ಆತನ ಹೆಸರು ಉಳಿದುಕೊಂಡಿದೆಯೆಂದೂ ಪ್ರದೀಪನು ಭಾವಿಸಿದ್ದನು.

ಚಂದ್ರನಾಥನು ಜಗದೀಶಪುರಕ್ಕೆ ಬಂದಾಗ ಆ ವಿಷಯದ ಬಗ್ಗೆ ಅಪಹಾಸ್ಯ ಮಾಡಿ ಅವನಿಗೆ ಅವಹೇಳನ ಮಾಡಿದ್ದನಲ್ಲದೆ, ತನ್ನ ಯುಕ್ತಿ ಚಮತ್ಕಾರದ ಮುಂದೆ ಪುರುಷೋತ್ತಮನ ಕಾರ್ಯಕೌಶಲ್ಯವು ನಡೆಯಲಾರದೆಂದು ಹೇಳಿದ್ದನು.

ಅಹಂಕಾರಕ್ಕೆ ಉದಾಸೀನವೇ ಮದ್ದೆಂಬಂತೆ ಚಂದ್ರನಾಥನು ಪ್ರದೀಪನು ಏನು ಹೇಳಿದರೂ 'ಹ್ಞೂ'ಗುಟ್ಟುತಿದ್ದನಲ್ಲದೆ ಪ್ರತಿಯಾಗಿ ಏನನ್ನೂ ಆಡುತ್ತಿರಲಿಲ್ಲ. ಏನಾದರೂ ಮಾತನಾಡಿದರೆ ಮಾತಿಗೆ ಮಾತು ಬೆಳೆದು ಕೋಪಕ್ಕೆ ಕಾರಣವಾಗುವುದೆಂದು ಚಂದ್ರನಾಥನು ಅರಿತಿದ್ದನು.

ಪ್ರದೀಪನ ಕಾರ್ಯಗೌರವವನ್ನು ಹಲವು ಬಗೆಯಲ್ಲಿ ಕೇಳಿ ತಿಳಿದು ಸಂತೋಷ ಪಟ್ಟಿದ್ದನಾದರೂ, ಚಂದ್ರನಾಥನ ಮುಖಾಂತರ ಆತನ ದುರಭಿಪ್ರಾಯವನ್ನು ಕೇಳಿ ಅವನ ಗರ್ವವೇ ಅವನನ್ನು ಹಾಳು ಮಾಡುತ್ತದೆಯೆಂದು ಪುರುಷೋತ್ತಮನು ಭವಿಷ್ಯ ನುಡಿದಿದ್ದನು.

ಕಾಂಚೀನಗರಕ್ಕೆ ಹೋಗಿ ಪುರುಷೋತ್ತಮನ ಎದುರಿಗೇ ಚಂದ್ರನಾಥನಿಗೆ ಅವಮಾನ ಪಡಿಸಬೇಕಲ್ಲದೆ, ಸಾಧ್ಯವಾದರೆ ಪುರುಷೋತ್ತಮನೊಡನೆಯೂ ಮಾತನಾಡಿ ತನ್ನ ಪರಾಕ್ರಮವನ್ನು ಹೇಳಿಕೊಳ್ಳಬೇಕೆಂದು ಬಯಸಿದ್ದನು.

ತಾನು ಯಾವ ಕಾರಣದಿಂದಲಾದರೂ ಒಂದು ಸಾರಿ ಕಾಂಚೀನಗರಕ್ಕೆ ಹೋಗಿ ಪುರುಷೋತ್ತಮನನ್ನು ಕಂಡು ಆತನ ಎದುರಿನಲ್ಲಿಯೇ ಚಂದ್ರನಾಥನಿಗೆ ಅವಮಾನಪಡಿಸಿ, ಸಾಧ್ಯವಾದರೆ ಪುರುಷೋತ್ತಮನಿಗೂ ಅವಮಾನ ಪಡಿಸುವೆನಲ್ಲದೆ, ಒಂದು ವೇಳೆ ಆತನು ಸಿಟ್ಟಾದರೆ ತನ್ನ ಸಾಮರ್ಥ್ಯದ ಅರಿವನ್ನು ತೋರಿಸಿ ಆತನನ್ನು ಬೆರಗುಗೊಳಿಸುವೆನು. ಮುಂದೆ ಆತನಿಗೆ ತನ್ನ ಯುಕ್ತಿ, ಚತುರತೆಯ ಅರಿವುಂಟಾಗುತ್ತದೆ. ಎಂಬುದಾಗಿ ಯೋಚಿಸಿಕೊಂಡನಲ್ಲದೆ ಪುರುಷೋತ್ತಮನಿಗಿಂತಲೂ ಪ್ರದೀಪನು ಮೇಧಾವಿಯೆಂಬ ಹೆಸರು ಬರುತ್ತದೆ. ಎಂದು ತಿಳಿದುಕೊಂಡನು.

ಯಾವ ಕಾರ್ಯದಲ್ಲಿಯಾದರೂ ಸರಿ, ಪುರುಷೋತ್ತಮನನ್ನು ಸೋಲಿಸದೆ ಬಿಡಬಾರದೆಂದು ತನಗೆ ತಾನೇ ದೃಢಪ್ರತಿಜ್ಞೆ ಮಾಡಿಕೊಂಡನು.

ಮಾನವರಿಗೆ ದುರ್ಬುದ್ಧಿಯುತ್ಪನ್ನವಾಗುವುದು ತಾನು ಕೆಡುವ ಕಾಲಕ್ಕೆ. ಯಾರನ್ನೇ ಆಗಲಿ ಹಾಳು ಮಾಡಬೇಕೆಂದು ಪ್ರಯತ್ನಪಟ್ಟವನು ಅದರಿಂದ ತಾನೇ ಕೆಡುವನು.

ದುರಹಂಕಾರವಿದ್ದ ಮನುಷ್ಯನು ಬಹು ಬೇಗ ಕೆಡುವನು. ಅವನ ಅಹಂಕಾರವೇ ಅವನನ್ನು ಕೆಡಿಸುತ್ತದೆ.

## ೨

ಕಾಂಚೀನಗರಕ್ಕೆ ಹೋಗಿ ಚಂದ್ರನಾಥನನ್ನು ಕಂಡು ಅವನಿಗೆ ಅವಮಾನ ಪಡಿಸಿ, ಪುರುಷೋತ್ತಮನೊಡನೆ ಸ್ಪರ್ಧೆಗೆ ನಿಲ್ಲಬೇಕೆಂದು ಯೋಚಿಸಿಕೊಂಡಿದ್ದ ಪ್ರದೀಪನಿಗೆ ಕೆಲವು ಕಾಲಾನಂತರ ಕಾಂಚೀನಗರಕ್ಕೆ ಹೋಗುವ ಪ್ರಮೇಯ ವೊದಗಿತು.

ರೋಗಿ ಬಯಸಿದ್ದೂ ಹಾಲೂ ಅನ್ನ, ವೈದ್ಯ ಹೇಳಿದ್ದೂ ಹಾಲೂ ಅನ್ನ ವೆಂಬ ಗಾಥೆಯಂತೆ, ಬಹುದಿನಗಳಿಂದ ಕಾಂಚೀನಗರಕ್ಕೆ ಹೋಗಬೇಕೆಂದಿದ್ದ ಪ್ರದೀಪನ ಮನೋಭಿಲಾಷೆಯು ತಾನಾಗಿಯೇ ನೆರವೇರಿತು.

ಕಾಂಚೀನಗರಕ್ಕೆ ಬಂದು ಚಂದ್ರನಾಥನ ಮನೆಯಲ್ಲಿಯೇ ಉಳಿದು ಕೊಂಡನು.

ಪ್ರದೀಪನ ಗುಣಾವಗುಣಗಳನ್ನು ಅರಿತಿದ್ದ ಚಂದ್ರನಾಥನು ಅವನೊಡನೆ ಯಾವ ಬಗೆಯಲ್ಲಿಯೇ ಆಗಲಿ ಹೆಚ್ಚಿನ ಮಾತುಕತೆಗಳಿಗೆ ಹೋಗಲಿಲ್ಲ.

ಒಂದು ದಿನ ಊಟ ಮಾಡಿ ತಾಂಬೂಲವನ್ನು ಹಾಕಿಕೊಳ್ಳುತ್ತಿರುವಾಗ ಚಂದ್ರನಾಥನು—

"ಪ್ರದೀಪಾ! ನಿನ್ನ ಹೆಸರು ಬಹುದೂರದವರೆವಿಗೆ ಹರಡಿದೆ. ಕಳ್ಳ, ದರೋಡೆಕೋರರು ನಿನ್ನ ಹೆಸರು ಕೇಳಿದರೆ ಹುಲಿಯನ್ನು ಕಂಡ ಕುರಿಯಂತೆ ಬೆದರುವರು. ಅವರಿಗೆಲ್ಲಾ ನೀನು ಮೃತ್ಯುಸ್ವರೂಪನಾಗಿರುವೆ. ಇನ್ನೂ ಹತ್ತು ಪಾಲು ನಿನ್ನ ಕೀರ್ತಿಯು ಹೆಚ್ಚಲೆಂದು ನಾನು ಹಾರೈಸುವೆನು" ಎಂದನು.

ಪ್ರದೀಪನಿಗೆ ಮಾತನಾಡಲು ಅವಕಾಶ ದೊರೆಯಿತು. ಈಗಲೇ ಇವನ ಗರ್ವಹರಣ ಮಾಡಬೇಕೆಂದುಕೊಂಡನು.

ಚಂದ್ರನಾಥನಾಡಿದ ಮಾತಿಗೆ ನಸುನಕ್ಕು ತನ್ನ ಎಡಗೈಯಿಂದ ಎಡಗಡೆಯ ಮೀಸೆಯನ್ನು ತೀಡಿಕೊಂಡನು.

"ಚಂದ್ರನಾಥ! ನೀನು ಹೇಳಿದುದು ನ್ಯಾಯವೇ. ನೀನಾದರೋ ಪ್ರತಿಯೊಂದು ಕಾರ್ಯವನ್ನೂ ಪುರುಷೋತ್ತಮನಿಗೊಪ್ಪಿಸಿ, ಸೋಮಾರಿಯಂತೆ ಕಾಲಕಳೆಯುತ್ತಿರುವೆ. ಆ ರೀತಿ ವ್ಯರ್ಥವಾಗಿ ಕಾಲಹರಣ ಮಾಡಿಕೊಂಡಿರಲು ನನಗಿಷ್ಟವಿಲ್ಲ."

ಚಂದ್ರನಾಥನು ಪ್ರದೀಪನ ಒಂದೇ ಒಂದು ಮಾತಿಗೆ ಭೂಮಿಗಿಳಿದು ಹೋದವನಂತಾಯಿತು.

ನಮ್ಮವರಲ್ಲಿ ಒಬ್ಬನನ್ನು ತೆಗಳುವುದೆಂದರೆ ಬಾಯಿಂದ ಉಗುಳುವಷ್ಟು ಸುಲಭವಾಗಿದೆ. ತಪ್ಪು ಮಾಡದ ಜನರಿಲ್ಲ. ಆದರೆ ತಾವು ಮಾಡಿದ ತಪ್ಪು ಅವರಿಗೆ ತಿಳಿಯುವುದಿಲ್ಲ. ಆ ರೀತಿ ತಪ್ಪು ಮಾಡಿದವನು ದೇವರೊಬ್ಬನೇ. ಅವನೇ ನಿರ್ದೋಷಿ. ಸರ್ವರಿಗೂ ಬೇಕಾದವನು. ಎಲ್ಲರನ್ನೂ ಒಂದೇ ಸಮನಾಗಿ ಕಾಣುವನು.

ಜನರು ನಡೆಯುವಾಗ ಎಡವಿ ಬೀಳುವರು. ಆಚರಿಸುವಾಗ ತಪ್ಪು ಮಾಡುವರು. ಅದಕ್ಕೆ ಸಿಟ್ಟಾಗಬಾರದು. ಮುಂಗೋಪಿಗಳಿಗೆ ಬಹುಬೇಗನೆ ಕೋಪಬರುವುದು. ಅವರಿಗೆ ಎಲ್ಲರಿಗಿಂತಲೂ ತಾವೇ ಹೆಚ್ಚೆಂಬ ಅಹಂಭಾವವಿರುತ್ತದೆ. ಅವರು ಯಾರನ್ನೂ ಲೆಕ್ಕಿಸುವುದಿಲ್ಲ. ಮುಂಗೋಪದ ಪ್ರತಿಫಲವಾಗಿ ಪೆಟ್ಟುತಿಂದರೂ ವಿವೇಕವನ್ನು ತಂದುಕೊಳ್ಳದ ಜನರೂ ಇರುವರು.

ಮಾನವರು ಏನೆಂದರೂ ಅಪೂರ್ಣರೇ. ಪರಿಪೂರ್ಣನಾದವನು ಭಗವಂತನೊಬ್ಬನೆ. ಆದರೂ ಮಾನವರು ತಾವೇ ಪರಿಪೂರ್ಣರೆಂದು ಭಾವಿಸುವರು. ತಮ್ಮಿಂದಲೇ ಸರ್ವವೆಂದು ಭಾವಿಸಿಕೊಂಡಿರುವವರೂ ಇರುವರು.

ಪರರ ದೋಷಗಳನ್ನು ಎಣಿಸಿ ಪರಿಹಾಸ್ಯ ಮಾಡುವುದರ ಬದಲು, ಮೊದಲು ತಮ್ಮ ತಪ್ಪುಗಳನ್ನು ತಿದ್ದಿ ಸರಿಪಡಿಸಿಕೊಳ್ಳುವುದು ಉತ್ತಮ. ದೀಪವು ಮನೆಯ ತುಂಬಾ ಪ್ರಕಾಶವುಂಟುಮಾಡಿದ್ದರೂ, ಅದರ ಬುಡದಲ್ಲಿ ಕತ್ತಲಿರುತ್ತದೆ. ಆ ಕತ್ತಲು ಅದಕ್ಕೆ ತಿಳಿಯುವುದಿಲ್ಲ. ಮನೆಯ ತುಂಬಾ ಬೆಳಕುಂಟುಮಾಡಿರುವೆನೆಂದೇ ಅದು ಭಾವಿಸುತ್ತದೆ.

ಹುಲ್ಲಿನ ಗುಡಿಸಿಲಿನಲ್ಲಿ ತಾವು ವಾಸಮಾಡಿಕೊಂಡಿದ್ದರೂ, ಬಂಗಲೆಯಲ್ಲಿರುವವರನ್ನು ದೂರುವರು. ತಮ್ಮ ಮೈಗೆ ಕೆಸರು ಅಂಟಿರುವಾಗ ಅದನ್ನು ತೆಗೆಯಲು ಯತ್ನಿಸದೆ, ಬೇರೆಯವರ ಮೈಗೆ ಅಂಟಿಕೊಂಡಿರುವ ಹುಲ್ಲುಗೂದಲನ್ನು ತೋರಿಸುವರು.

ತಿಳಿವಳಿಕೆಯುಳ್ಳವರಾದರೂ ಸರಿ, ಒಬ್ಬರ ತಪ್ಪು ತೋರಿಸುವಾಗ ವಿಶೇಷ ಎಚ್ಚರಿಕೆಯಿಂದಿರಬೇಕು. ಪರಸ್ಪರ ಪ್ರೀತಿವಾತ್ಸಲ್ಯದಿಂದಿದ್ದು ಅನ್ಯೋನ್ಯವಾಗಿದ್ದರೆ ಒಬ್ಬರು ತಪ್ಪು ಮಾಡಿದರೂ, ಮತ್ತೊಬ್ಬರು ಅದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಪ್ರದೀಪನು ತನ್ನನ್ನು ಅಲ್ಲಗಳೆದನೆಂದು ಚಂದ್ರನಾಥನು ಸಿಟ್ಟಾಗಲಿಲ್ಲ. ಪ್ರದೀಪನ ಯೋಗ್ಯತೆಯೇನೆಂಬುದು ಅವನಿಗೆ ಮೊದಲೇ ತಿಳಿದಿದ್ದಿತು. ಆ ಪ್ರಯುಕ್ತ ಅವನು ತನ್ನ ತುಟಿ ಎರಡು ಮಾಡಲಿಲ್ಲ.

ಚಂದ್ರನಾಥನು ಮಾತನಾಡದೆ ಇರಲು ಪ್ರದೀಪನು ಪುನಃ—

"ಚಂದ್ರನಾಥ ! ಏಕೆ ಮಾತನಾಡದಿರುವೆ ? ನಾಲಿಗೆ ಬಿದ್ದುಹೋಯಿತೇ? ಅಥವಾ ಅವಮಾನವಾಯಿತೇ ? ನಾನೇನೂ ಅವಮಾನವಾಗುವಂತಹ ಮಾತನಾಡಲಿಲ್ಲ. ನಿನ್ನ ನಡವಳಿಕೆಯ ಕಾರ್ಯಕ್ರಮವನ್ನು ಹೇಳಿದೆ. ಅದಕ್ಕೇಕೆ ಬೇಜಾರು ಪಟ್ಟುಕೊಳ್ಳುವೆ. 'ಕಂಡ ಮಾತನ್ನು ಕಂಡಹಾಗೆ ಹೇಳಿದರೆ ಕೆಂಡದಂತಹ ಕೋಪ ಬರುವುದಂತೆ' ಹಾಗಾಯಿತು, ನನ್ನ ನಿನ್ನ ಮಾತುಕತೆಗಳ ವಿಷಯ. ಆ ವಿಷಯವಿರಲಿ, ನೀನೇಕೆ ಮಾತನಾಡದಿರುವೆ ? " ಎಂದು ಕೇಳಿದನು.

ಚಂದ್ರನಾಥನು ಗಾಂಭೀರ್ಯದಿಂದಲೇ—

"ಪ್ರತಿಯೊಂದು ವಿಷಯವನ್ನೂ ನೀನೇ ಹೇಳಿರುವಾಗ ನಾನು ಮಾತನಾಡುವುದಾದರೂ ಏನಿದೆ ? ಮಹಾಮಹಿಮನಾದ ಸರ್ವಜ್ಞಮೂರ್ತಿಯು,

ಒಂದನೆರಡೆಂಬ ತಾ | ಹಂದಿಯನು ಮೊಲನೆಂಬ
ಗಂಧಪರಿಮಳವ ಕೊರಡೆಂಬ | ಮೂರ್ಖ ತಾ
ನೆಂದುದನೆನ್ನಿ ಸರ್ವಜ್ಞ ||

ಎಂದು ಹೇಳಿರುವನು. ಅದರಂತೆ ನೀನು ಏನು ಹೇಳಿದರೂ ಅದೇ ರೀತಿ ಹ್ಞೂಗುಟ್ಟಬೇಕಾಗಿದೆ. ಇಲ್ಲವೆಂದರೆ ನಿನಗೆ ಬಹು ಬೇಗನೆ ಕೋಪ

ಬರುತ್ತದೆ. ನೀನೇ ಚಕ್ರವರ್ತಿ, ರವಿಕುಲಸಾರ್ವಭೌಮನೆಂದರೆ ಯಾವ ಬಗೆಯ ಕಲಹಕ್ಕೂ ಆಸ್ಪದವಿರುವುದಿಲ್ಲ, ಮನಸ್ತಾಪವೂ ಉಂಟಾಗುವುದಿಲ್ಲ. ಆದ್ದರಿಂದ ನಿನ್ನ ಮಾತಿಗೆ ಪ್ರತ್ಯುತ್ತರವೀಯದೆ ಮೌನವಾಗಿದ್ದೆನು. ಆದರೆ ನೀನು ಅಷ್ಟು ಮಾತ್ರಕ್ಕೆ ಬಿಡದೆ ಇದ್ದ ಪ್ರಯುಕ್ತ ಮಾತನಾಡಬೇಕಾಯಿತು. ನಿನ್ನ ವಿಷಯದಲ್ಲಿ ನಾನು ಹೆಚ್ಚಿಗೆ ಹೇಳುವುದಾದರೂ ಏನಿದೆ? ಹೇಳು" ಎಂದನು.

ಚಂದ್ರನಾಥನ ಪ್ರತಿಯೊಂದು ಮಾತೂ ಪ್ರದೀಪನ ಎದೆಗೆ ಬಾಣದಿಂದ ಹೊಡೆದಂತೆ ನೋವನ್ನುಂಟುಮಾಡಿತು.

ತನಗೆ ಚುಚ್ಚು ಮಾತುಗಳಿನ್ನು ಆಡಿ ತನ್ನ ಮನನೋಯಿಸಿದನೆಂದು ಕೊಂಡನು.

"ಚಂದ್ರನಾಥ! ಮಹಾಜ್ಞಾನಿಯಂತೆ ನಟಿಸಿ, ಚುಚ್ಚು ಮಾತುಗಳ ನ್ನಾಡಿ ನನಗೆ ಇನ್ನೂ ಹೆಚ್ಚಿನ ಕೋಪವುಂಟುಮಾಡಿದೆ. ಈ ಮಾತನ್ನು ಬೇರೆ ಯಾರಾದರೂ ಆಡಿದ್ದರೆ ಅವರ ಹಲ್ಲುಗಳೆಲ್ಲವನ್ನೂ ಉದುರಿಸಿ ಇನ್ನೊಂದು ಸಾರಿ ಯಾರಿಗೂ ಆಡದಂತೆ ಬುದ್ಧಿಕಲಿಸುತ್ತಿದ್ದೆನು. ನೀನಾಗುವ ಹೊತ್ತಿಗೆ ತಾಳ್ಮೆಯಿಂದಿರುವೆನು."

"ನಿನ್ನ ತಾಳ್ಮೆಯು ನನಗೂ ತಿಳಿದಿದೆ. ಕೆಲವು ಜನ ಕಳ್ಳರನ್ನೂ, ದರೋಡೆಕೋರರನ್ನೂ ಹಿಡಿದ ಮಾತ್ರಕ್ಕೆ ನನ್ನ ಸಮಾನರಿಲ್ಲವೆಂದು ಹೇಳಿಕೊಳ್ಳುವೆ. ಇಂತಹ ಗುಣವುಳ್ಳ ನಿನಗೆ ನಾನು ಹೇಳುವುದಾದರೂ ಏನಿದೆ?"

"ಏನೂ ಇಲ್ಲವೆಂದೇ ಚುಚ್ಚು ಮಾತುಗಳನ್ನಾಡಿದೆ. ನಾನು ಹೆಮ್ಮೆ ಪಡುವುದು ನಿಜ. ನಾನಾದರೂ ಕಳ್ಳ, ಕೊಲೆಗಾರರನ್ನು ಯುಕ್ತಿ, ಚತುರತೆ ಗಳಿಂದ ಸೆರೆ ಹಿಡಿದಿರುವೆನು. ನೀನೇನು ಮಾಡಿರುವೆ? ಯಾರನ್ನು ಹಿಡಿದಿ ರುವೆ? ನೀನು ಖಂಡಿತವಾಗಿಯೂ ಇನ್ಸ್‌ಪೆಕ್ಟರ್ ಕೆಲಸಕ್ಕೆ ಅರ್ಹನಲ್ಲ. ನಾನೇ ನಾದರೂ ಇದಕ್ಕಿಂತಲೂ ಹೆಚ್ಚಿನ ಅಧಿಕಾರದಲ್ಲಿದ್ದಿದ್ದರೆ ಖಂಡಿತವಾಗಿ ನಿನ್ನನ್ನು ಈ ಕೆಲಸದಲ್ಲಿರಗೊಡುತ್ತಿರಲಿಲ್ಲ."

"ಪ್ರದೀಪಾ! ಸುಮ್ಮನೆ ಬಾಯಿಗೆ ಬಂದಂತೆ ಮಾತನಾಡಬೇಡ. ಮನುಷ್ಯನಿಗೆ ಅಹಂಕಾರವಿರಬಾರದು. ಹಾಗಿದ್ದರೆ ಅವನ ಅಹಂಕಾರವು ಅವ

ನನ್ನೇ ಹಾಳುಮಾಡುತ್ತದೆ. ವಿಲಾಸನಗರದಲ್ಲಿದ್ದ *ಇನ್ಸ್ಪೆಕ್ಟರ್ ಇಂದಿರೇಶ ಬಾಬುವಿನ ಮತ್ತು ಭೂಪತಿನಗರದ ಇನ್ಸ್ಪೆಕ್ಟರ್ ×ಕಾಂತರಾಜುವಿನ ಅವಸ್ಥೆ ಯೇನಾಯಿತೆಂಬುದನ್ನು ಬಲ್ಲೆಯಾ ? "

"ನನ್ನನ್ನು ಅವರಂತೆ ತಿಳಿಯಬೇಡ. ಅವರಾಗುವ ಹೊತ್ತಿಗೆ ಪುರುಷೋ ತ್ತಮನ ಮೊರೆಬಿದ್ದರು. ನಾನಾಗಿದ್ದರೆ ಖಂಡಿತವಾಗಿಯೂ ಪುರುಷೋತ್ತಮ ನಲ್ಲಿಗೇ ಹೋಗುತ್ತಿರಲಿಲ್ಲ."

"ಈಗ ಹೇಳಿದ ಹಾಗಲ್ಲ. ಇಂದಿರೇಶಬಾಬು, ಕಾಂತರಾಜುವಿನ ಸ್ಥಿತಿಯು ನಿನಗೆ ಬಂದಿದ್ದರೆ ಅಗ ತಿಳಿಯುತ್ತಿತ್ತು. ಪುರುಷೋತ್ತಮನಾಹೊತ್ತಿಗೆ ಅವನನ್ನು ಕಂಡುಹಿಡಿದನಲ್ಲದೇ ಬೇರೆ ಇತರರಾರಿಂದಲೂ ಸಾಧ್ಯವಾಗುತ್ತಿರಲಿಲ್ಲ ವೆಂದು ನಿಸ್ಸಂದೇಹವಾಗಿ ಹೇಳಬಲ್ಲೆನು."

"ನೀನು ಪುರುಷೋತ್ತಮನ ಹೊಗಳುಭಟ್ಟನೇ ಸರಿ, ನಿನ್ನಂತವರಿರುವು ದರಿಂದಲೇ ಅವನ ಕೀರ್ತಿಯು ಎಲ್ಲಾ ಊರುಗಳಲ್ಲಿಯೂ ಹರಡಿಕೊಂಡಿದೆ."

"ನಾನೇನೋ ಹೊಗಳುಭಟ್ಟ. ಪತ್ರಿಕಾ ಸಂಪಾದಕರೂ ಹೊಗಳು ಭಟ್ಟರೇ ? ಬೇಕೆಂದು ಪುರುಷೋತ್ತಮನ ಕಾರ್ಯಕಲಾಪಗಳನ್ನು ಹೊಗಳಿ ಬರೆಯುವರೇ ?"

"ನಿನ್ನಂಥಹವರು ಪತ್ರಿಕಾಪ್ರಕಟಣೆಗೆ ಬರೆದು ಕಳುಹಿಸಿದರೆ ಅವರೇಕೆ ಪ್ರಕಟಿಸುವುದಿಲ್ಲ ? ಪತ್ರಿಕೆ ತುಂಬಲು ಅವರೂ ಸಹ ಏನಾದರೊಂದು ವಿಷಯ ವನ್ನು ಖಾಲಿ ಬಿದ್ದ ಜಾಗದಲ್ಲಿ ತುಂಬಬೇಕಾಗುತ್ತದೆ."

"ನೀನು ತಿಳುವಳಿಕೆಯಿಲ್ಲದೆ ಮಾತನಾಡುವೆ. ಪುರುಷೋತ್ತಮನ ಯೋಗ್ಯತೆಯೇನೆಂಬುದನ್ನರಿಯದೆ ಆತನನ್ನು ಹೀಯಾಳಿಸಬೇಡ. ಆತನ ಕರ್ತವ್ಯಪಾಲನೆಗೆ ರಾಜಮಹಾರಾಜರೇ ಮೆಚ್ಚಿ ಸನ್ಮಾನ ಮತ್ತು ಯೋಗ್ಯತಾ ಪತ್ರಗಳನ್ನು ಕೊಟ್ಟಿರುವಾಗ, ನೀನು ತಿಳಿಯದೆ ಅವನನ್ನು ಜರಿಯಬೇಡ."

"ನೂರಾರು ಜನ ಬಡಬಗ್ಗರ ರಕ್ತವನ್ನು ಹೀರಿದವರು ಇಂದು ಶ್ರೀಮಂತ ರೆನಿಸಿಕೊಂಡು ಮೆರೆಯುತ್ತಿರುವರು. ನೂರಾರು ಜನ ದೀನ, ದರಿದ್ರರು

---

* **ಚೋರಮಾರ್ತಾಂಡ**—ಪುರುಷೋತ್ತಮನ ಎರಡನೆಯ ಸಾಹಸ.

× **ಚೋರಕೇಸರಿ**—ಪುರುಷೋತ್ತಮನ ಹದಿನೈದನೆಯ ಸಾಹಸ.

ಹಗಲಿರುಳೆನ್ನದೆ ದುಡಿದು, ತಮ್ಮ ಮೈ ಬೆವರನ್ನು ಸುರಿಸಿದುದರ ಪರಿಣಾಮ ವಾಗಿ ಒಬ್ಬನು ಲಕ್ಷಾಧೀಶ್ವರನೆನಿಸಿಕೊಳ್ಳುವನು. ಅಂತಹ ಶ್ರೀಮಂತರು ಒಂದು ಧರ್ಮಶಾಲೆಯನ್ನೋ, ಪಾಠಶಾಲೆಯನ್ನೋ ಅಥವಾ ಆಸ್ಪತ್ರೆಯನ್ನೋ ಕಟ್ಟಿಸಿದರೆ, ಲೋಕಸೇವಾನಿರತ, ರಾವ್‌ಬಹದ್ದೂರ್, ಧರ್ಮರತ್ನಾಕರ ಎಂಬ ಬಿರುದುಗಳು ಬರುತ್ತವೆ. ಅವರ ಅಂತರಂಗದಲ್ಲಿ ಹಲವು ಬಗೆಯ ಪಾಪ ಕಾರ್ಯಗಳಿದ್ದರೂ ಅವು ಕಣ್ಮರೆಯಾಗಿ, ಬಹಿರಂಗವಾಗಿ ತೆಗೆದುಕೊಂಡ ಬಿರುದು, ಬಾವಲಿಗಳು ಪತ್ರಿಕೆಗಳ ತುಂಬಾ ಪ್ರಕಟವಾಗುತ್ತವೆ. ರಾತ್ರಿ ಯೆಲ್ಲಾ ದರೋಡೆ ಮಾಡಿ, ದರೋಡೆಕೋರರೆನಿಸಿ, ಹಗಲೆಲ್ಲಾ ದೊಡ್ಡ ಅಧಿ ಕಾರಿಗಳ ಸಂಗಡ ಓಡಾಡಿಕೊಂಡು ಹೆಮ್ಮೆಯಿಂದ ಮೆರೆಯುವರು. ಅವರು ಬಹಿರಂಗವಾಗಿ ಮಾಡುವ ಧರ್ಮಕಾರ್ಯದಿಂದ, ಅಂತರಂಗದಲ್ಲಿ ಮಾಡಿದ್ದ ಪಾಪಕಾರ್ಯಗಳೆಲ್ಲವೂ ಬಯಲಾಗದೆ ಹಾಗೇ ಉಳಿಯುತ್ತವೆ. ಪುರುಷೋ ತ್ತಮನಿಗೆ ಬಿರುದು, ಬಾವಲಿಗಳು ಬಂದದ್ದು ಧರ್ಮರತ್ನಾಕರ, ಲೋಕಸೇವಾ ನಿರತರ ಬಿರುದಿಗೆ ಹೋಲಿಸುವೆನು."

"ಹಾಗಾದರೇ! ಪುರುಷೋತ್ತಮನು ರಾತ್ರಿಯವೇಳೆ ದರೋಡೆ ಮಾಡಿ, ಹಗಲುವೇಳೆ ಪತ್ತೇದಾರಿಯನ್ನು ಮಾಡುವನೆಂದು ನಿನ್ನ ಅಭಿಪ್ರಾಯವೇ ? ಆತನು ಆಷಾಢಭೂತಿ ಪತ್ತೇದಾರನೆಂದು ನಿನ್ನ ಭಾವನೆಯೇ ? "

"ನಾನು ಹಾಗೆಂದು ಹೇಳಲಿಲ್ಲ."

"ನೀನು ಹೇಳಿದುದು ಅದಕ್ಕೇ ಸರಿಯಾಗಿ ಹೋಲಿಕೆಯಾಗುತ್ತದೆ. ಮತ್ತೆ ಹಾಗೆಂದು ಹೇಳಲಿಲ್ಲವೆಂದು ಹೇಳುವೆ. ಕೆಲವು ಜನ ದರೋಡೆಕೋರ ರನ್ನೂ, ಕಳ್ಳರನ್ನೂ ಸೆರೆಹಿಡಿದ ಮಾತ್ರಕ್ಕೆ ನನ್ನ ಸಮಾನರಿಲ್ಲವೆಂತಲೂ, ಪುರು ಷೋತ್ತಮನಿಗಿಂತಲೂ ಮೇಲಾದವನೆಂದು ನೀನು ತಿಳಿದಿರುವೆ. ಈ ರೀತಿ ಗರ್ವ ಪಡುವುದು ಸರಿಯಲ್ಲ. ತಿಳುವಳಿಕೆಯುಳ್ಳವರಾರೇ ಆಗಲಿ, ತಮ್ಮನ್ನು ತಾವೇ ಹೊಗಳಿಕೊಳ್ಳುವುದಿಲ್ಲ. ಗರುಡನು ಗರ್ವಪಟ್ಟಿದ್ದಕ್ಕೆ ಗರ್ವಭಂಗ ವಾಯಿತು. ಸುದರ್ಶನವು ಅಹಂಕಾರ ಪಟ್ಟಿದ್ದಕ್ಕೆ ತಕ್ಕ ಶಾಸ್ತಿಯಾಯಿತು. ಭೀಮಾರ್ಜುನರು ಗರ್ವ ಪಟ್ಟಿದ್ದಕ್ಕೆ ಅವರ ಅಹಂಕಾರವೆಲ್ಲಾ ಅಡಗಿತು. ಅಂತಹವರ ಪಾಡೇ ಹಾಗಾಗಿರುವಾಗ, ನಿನ್ನದು ಯಾವ ಲೆಕ್ಕ ? ಪುರುಷೋ

ತ್ತಮನನ್ನು ಹೀಯಾಳಿಸಿದರೆ, ಮುಂದೆ ನಿನ್ನ ಮರ್ಯಾದೆಯೇ ಹೋಗುವು ದಲ್ಲದೆ, ಕಡೆಗೆ ನಿನ್ನ ಗರ್ವವೂ ಅಡಗುತ್ತದೆ."

"ಚಂದ್ರನಾಥ! ಯಾವುಯಾವುದೋ ಪೂರ್ವಕಾಲದ ಉದಾಹರಣೆ ಗಳನ್ನು ಹೇಳಿ ನನ್ನನ್ನು ಬೆದರಿಸಬೇಡ. ಅಂತಹ ಗೊಡ್ಡು ಬೆದರಿಕೆಗಳಿಗೆ ಬೆದರುವವನು ನಾನಲ್ಲ. ನಾನು ಜಗದೀಶಪುರದ ಆಬಾಲವೃದ್ಧರಿಗೆಲ್ಲಾ ಚಿರ ಪರಿಚಿತನಾಗಿರುವೆನು. ಪ್ರತಿಯೊಬ್ಬರೂ ನನ್ನ ಗುಣಾವಗುಣಗಳನ್ನು ಅರಿತಿರು ವರು. ನಾನು ಎಂತಹವನೆಂದು ಅವರನ್ನು ಕೇಳಿ ತಿಳಿದುಕೊ. ಕಳ್ಳದರೋಡೆ ಕೋರರು ನನ್ನ ಹೆಸರನ್ನು ಕೇಳಿದರೆ ಸಾಕು, ಗಡಗಡನೆ ನಡುಗುವರು. ನಾನು ಜಗದೀಶಪುರಕ್ಕೆ ಹೋಗುವ ಮೊದಲು ಕಳ್ಳರು, ದರೋಡೆಕೋರರು, ಜೂಜುಕೋರರು ತುಂಬಿಕೊಂಡಿದ್ದರು. ಕಳ್ಳಭಟ್ಟಿ ತಯಾರುಮಾಡುವವರ ನ್ನೆಲ್ಲಾ ಹಿಡಿದು ಶಿಕ್ಷೆಗೊಳಪಡಿಸಿದೆ. ನಾನು ಹೋದನಂತರ ಅವರೆಲ್ಲರನ್ನೂ ಹಿಡಿದು ಶಿಕ್ಷೆಗೆ ಗುರಿಪಡಿಸಿದೆ. ಹುಡುಕಿದರೂ ಒಂದು ವೇಶ್ಯೆಯ ಮನೆಯಿಲ್ಲ. ಜಗದೀಶಪುರವು ರಾಮರಾಜ್ಯವೆನಿಸಿಕೊಂಡಿದೆ. ಕಳ್ಳರು, ಕೊಲೆಗಾರರು, ದರೋಡೆಕೋರರು ದೂರದೇಶಗಳಿಗೆ ಓಡಿಹೋಗಿ ಅಲ್ಲಿ ನೆಲೆಯಾಗಿರುವರು. ಅರ್ಧ ರಾತ್ರಿಯಲ್ಲಿ ಯಾರುಬೇಕಾದರೂ ಒಂಟಿಯಾಗಿ ತಿರುಗಾಡಬಹುದು. ನಾನಿರುವವರೆವಿಗೆ ಜಗದೀಶಪುರದಲ್ಲಿ ಒಂದು ಕಳ್ಳತನವಾಗಲಾರದು, ಒಂದು ದರೋಡೆಯಾಗದು, ಒಂದು ಕೊಲೆಯೂ ಸಹ ನಡೆಯುವಹಾಗಿಲ್ಲ, ಜೂಜಿನ ಕಟ್ಟೆಗಳು ಸ್ಥಾಪಿತವಾಗುವಹಾಗಿಲ್ಲ, ವೇಶ್ಯೆಯರು ಅಲ್ಲಿಗೆ ಬಂದು ನೆಲೆ ಯಾಗುವುದಿಲ್ಲ. ಪುರುಷೋತ್ತಮನು ಈ ನಗರದಲ್ಲಿಯೇ ನೆಲೆಯಾಗಿ ನೂರಾರು ಜನ ಕಳ್ಳಕೊಲೆಗಾರರನ್ನು ಸೆರೆಹಿಡಿದಿದ್ದರೂ, ಆಗಾಗ್ಗೆ ಕೊಲೆ, ಕಳ್ಳತನಗಳು ನಡೆಯುತ್ತಲೇ ಇರುತ್ತವೆ. ಏನು ಪ್ರಖ್ಯಾತಿ ಪಡೆದರೇನು ಪ್ರಯೋಜನ? ಹೇಳು ?"

"ನಿನ್ನ ಮಾತು ಕೇಳಿದರೆ ಬುದ್ಧಿಯಿಲ್ಲದವರೂ ಸಹ ನಗುವರು."

"ಏಕೆ?"

"ನೀನು ಜಗದೀಶಪುರಕ್ಕೆ ಮಾತ್ರ ಪ್ರಖ್ಯಾತನಾಗಿರುವೆ. ಆ ಪುರದ ನಿವಾಸಿಗಳಿಗೆ ಚಿರಪರಿಚಿತನಾಗಿರುವೆ, ಅಷ್ಟುಮಾತ್ರವಲ್ಲದೆ ಸುತ್ತಮುತ್ತಲ ನಗರ, ಗ್ರಾಮ, ಹಳ್ಳಿಯ ನಿವಾಸಿಗಳಾರಿಗೂ ತಿಳಿಯದು. ಪುರುಷೋ ತ್ತಮನ ಹೆಸರು ಭಾರತದೇಶದಲ್ಲೆಲ್ಲಾ ಹರಡಿದೆ. ಸಾಮಾನ್ಯವಾಗಿ ಪ್ರತಿ

ಯೊಬ್ಬರೂ ಪುರುಷೋತ್ತಮನ ಹೆಸರನ್ನು ಅರಿತಿರುವರು. ಜಗದೀಶಪುರ ದಲ್ಲಿರುವವರು ಇಪ್ಪತ್ತುಸಾವಿರ ಜನ. ಕಾಂಚೀನಗರದಲ್ಲಿ ಹದಿನೇಳು ಲಕ್ಷ ಜನರಿರುವರು. ಇಂತಹ ಜನಭರಿತ ನಗರದಲ್ಲಿ ಆಗಾಗ್ಗೆ ಕೊಲೆಗಳು ನಡೆ ಯುವುದೆಂದರೆ ಆಶ್ಚರ್ಯವೇನಲ್ಲ. ಈ ಹದಿನೇಳು ಲಕ್ಷ ಜನರೂ ಪುರುಷೋ ತ್ತಮನ ಹೆಸರನ್ನು ತಿಳಿದಿರುವರು. ಈ ನಗರ ಬೇಡ, ನಿನ್ನ ಜಗದೀಶಪುರದವ ರಾರಿಗೇ ಆಗಲಿ, ಕಾಂಚೀನಗರದ ಪುರುಷೋತ್ತಮನಾರೆಂದು ಕೇಳಿದರೆ ಇಂತಹವನೆಂದು ಹೇಳುವರು. ಈ ನಗರನಿವಾಸಿಗಳಿಗೆ ಜಗದೀಶಪುರದ ಪ್ರದೀಪನಾರೆಂದು ಕೇಳಿದರೆ ಅದ್ಯಾರೋ ಏನೋ ತಮಗೆ ತಿಳಿಯದೆನ್ನುವರು. ಒಂದು ವೇಳೆ ತಿಳಿದಿದ್ದರೆ ಸ್ವಲ್ಪ ಜನಕ್ಕೆ ತಿಳಿದಿರಬಹುದು. ಹೀಗಿರುವಾಗ ಏಕೆ ನನ್ನ ಸಮಾನರಿಲ್ಲವೆಂದು ಗರ್ವಪಡುವೆ. ನೀನು ಅಂತಹ ಪ್ರಖ್ಯಾತನಾಗಿ ದ್ದರೆ ನಿನಗೇಕೆ ಪುರುಷೋತ್ತವನಂತೆ ಬಿರುದುಬಾವಲಿಗಳಿಲ್ಲ ? ನೀನು ಮಹಾ ಸತ್ಯಸಂಧನೆನಿಸಿಕೊಂಡಿದ್ದರೂ ಇನ್ನೂ ಈ ಪದವಿಯಲ್ಲಿಯೇ ಇರುವೆಯೇಕೆ? ಡಿ.ಎಸ್.ಪಿ.ಯೋ, ಐ.ಜಿ.ಪಿ.ಯೋ ಆಗಬಹುದಿತ್ತಲ್ಲ."

"ನನಗೆ ಹೆಸರುಗಳಿಸಬೇಕೆಂಬ ಆಸೆಯೇನೂ ಇಲ್ಲ. ನಾನು ಮಾಡುವ ಕೆಲಸವು ನನ್ನ ಮನಕ್ಕೆ ಒಪ್ಪಿಗೆಯಾದರೆ ಸಾಕು, ಇತರರ ಮೆಚ್ಚಿಗೆಯೇನೂ ನನಗೆ ಬೇಕಿಲ್ಲ. ಮೇಲಧಿಕಾರಿಗಳಿಂದ ಬಿರುದುಬಾವಲಿಗಳನ್ನು ಪಡೆಯಬೇ ಕೆಂಬ ಇಚ್ಛೆಯು ನನಗಿಲ್ಲ. ಅಂತಹ ಬಿರುದು, ಬಾವಲಿಗಳು ನಿನ್ನ ಪುರುಷೋ ತ್ತಮನಿಗೇ ಇರಲಿ. ನನಗೆ ಇದಕ್ಕಿಂತಲೂ ಹೆಚ್ಚಿನ ಅಧಿಕಾರ ಬೇಕೆಂಬ ದುರಭಿಪ್ರಾಯವೂ ಇಲ್ಲ."

"ನಿನ್ನ ಮಾತಿನ ಸೂಕ್ಷ್ಮಾಂಶವನ್ನು ಗಮನಿಸಿ ನೋಡಿದರೆ ಈ ವಿಷಯ ವನ್ನು ಹೇಳುವುದಕ್ಕಾಗಿಯೇ ಈ ನಗರಕ್ಕೆ ಬಂದಿರುವಹಾಗೆ ತೋರುತ್ತದೆ."

"ಹಾಗೆಂತಲೇ ಭಾವಿಸಿಕೊ."

"ಮತ್ತು ಪುರುಷೋತ್ತಮನೊಡನೆ ಸ್ಪರ್ಧೆಗೆ ನಿಂತು, ಆತನಿಗಿಂತಲೂ ಹೆಚ್ಚಿನವನೆನಿಸಿಕೊಳ್ಳಬೇಕೆನ್ನುವ ದುರಭಿಪ್ರಾಯವಿದೆ."

"ಅದೂ ಸಹ ನಿಜವೇ ?"

"ಹಾಗಾದರೇ! ಆತನೊಡನೆ ಸ್ಪರ್ಧೆಗೆ ನಿಲ್ಲಬೇಕೇ ?"

"ನಿಜವಾಗಿಯೂ ನಿಲ್ಲಬೇಕೆಂಬ ಅಪೇಕ್ಷೆಯಿದೆ. ಜಗದೀಶಪುರದ ಇನ್ಸ್‌ಪೆಕ್ಟರ್ ಪ್ರದೀಪನು ಯುಕ್ತಿ, ಚತುರತೆಗಳಲ್ಲಿ ಕಾಂಚೀನಗರದ ಪತ್ತೇದಾರ

ಪುರುಷೋತ್ತಮನಿಗಿಂತಲೂ ಒಂದು ಕೈ ಮೇಲಾದವನೆಂದು ಜನರು ಹೇಳಿದರೆ ಸಾಕು."

"ಅದೆಲ್ಲಾ ಕನಸಿನ ಮಾತು."

"ಕನಸಿನ ಮಾತನ್ನು ನನಸು ಮಾಡಿ ತೋರಿಸುವೆನು. ನಿನ್ನಂತಹವನಿದ್ದರೆ ಕನಸಿನ ಮಾತೆಂದೇ ಹೇಳುವರು. ನನ್ನಂತಹವನನ್ನು ಯಾರೂ ಆ ರೀತಿ ಹೇಳುವುದಿಲ್ಲ."

"ಸರಿ ! ಪುರುಷೋತ್ತಮನೊಡನೆ ಸ್ಪರ್ಧೆಗೆ ನಿಲ್ಲಬೇಕೆಂದಿರುವೆಯಲ್ಲವೇ?"

"ಹೌದು."

"ಯಾವ ರೀತಿಯ ಸ್ಪರ್ಧೆಯಾಗಬೇಕು ?"

"ಯಾವ ರೀತಿಯಾದರೂ, ಇಬ್ಬರ ಬುದ್ಧಿಕುಶಲತೆಗಳು ಪರೀಕ್ಷೆಯಾಗಬೇಕು."

"ನಿನ್ನ ಇಷ್ಟದಂತೆಯೇ ಆಗಲಿ. ನಾನು ಪುರುಷೋತ್ತಮನನ್ನು ಕಂಡು, ಆತನೊಡನೆ ನಿನ್ನ ವಿಷಯವನ್ನು ಹೇಳಿ, ಮುಂದೆ ಹೇಳುವೆನು. ಆಗಬಹುದೇ ?"

"ಹೇಳುವುದೇನು ? ಆತನನ್ನು ಒಪ್ಪಿಸು."

"ಇಗಲಿ ! ಆತನನ್ನು ಒಪ್ಪಿಸುವ ಭಾರವು ನನಗಿರಲಿ."

"ಆತನು ಒಪ್ಪದೇ ಹೋದರೆ ?"

"ನಿನಗೇಕೆ ಅದರ ಚಿಂತೆ ? ಹೇಗಾದರೂ ಮಾಡಿ ಪುರುಷೋತ್ತಮನನ್ನು ಒಪ್ಪಿಸುವೆನು. ಅನಂತರ ನಿನ್ನ ಆತನ ಬುದ್ಧಿ, ಚಮತ್ಕಾರಗಳ ಪರೀಕ್ಷೆಯಲ್ಲಿ ಯಾರು ಹೆಚ್ಚು ಯಾರು ಕಡಿಮೆಯೆಂದು ತಿಳಿಯುತ್ತದೆ. ಈಗ ಏಕೆ ಆ ಮಾತು ?"

"ನೀನು ಪುರುಷೋತ್ತಮನನ್ನು ಒಂದು ಸಾರಿ ಒಪ್ಪಿಸು. ಅನಂತರ ಮುಂದೆ ಏನು ನಡೆಯುವುದೆಂದು ನೀನೇ ನೋಡುವೆ."

"ಅದಕ್ಕೆ ಪಂದ್ಯವೇನೂ ಬೇಡವೇ ?"

"ಏನು ಪಂದ್ಯವಿರಲಿ ?"

"ನೀನೇ ಹೇಳು ?"

"ಏನು ಪಂದ್ಯವಿದ್ದರೂ ಅದಕ್ಕೆ ನಾನು ತಯಾರಿರುವೆನು."

"ಆಗಲಿ ! ಈ ವಿಷಯವಾಗಿ ಪುರುಷೋತ್ತಮನೊಡನೆ ಪ್ರಸ್ತಾಪ ಮಾಡಿ ಹೇಳುವೆನು."

"ಯಾರೊಡನೆಯಾದರೂ ಪ್ರಸ್ತಾಪ ಮಾಡು. ನಾನೇನೂ ಬೇಡವೆನ್ನಲಾರೆ. ಒಟ್ಟನಲ್ಲಿ ನಮ್ಮಿಬ್ಬರ ಬುದ್ಧಿ ಕುಶಲತೆಗಳ ಪರೀಕ್ಷೆಯು ನಡೆಯಬೇಕಾಗಿದೆ."

"ಆತನೊಡನೆ ಸ್ಪರ್ಧೆಗೆ ನಿಂತರೆ ನೀನು ಖಂಡಿತಾ ಸೋಲುವೆ. ಆಗಿನ ನಿನ್ನ ಭವಿಷ್ಯವನ್ನು ಈಗಲೇ ಹೇಳುವೆನು."

"ಚಂದ್ರನಾಥ ! ಇನ್ನೂ ನೀನು ಪರಿಹಾಸ್ಯದ ಮಾತಿನಲ್ಲಿಯೇ ಇರುವೆ. ನನ್ನ ಗುಣಾವಗುಣಗಳು ನಿನಗೆ ಸಂಪೂರ್ಣವಾಗಿ ತಿಳಿಯದು. ಆ ಪ್ರಯುಕ್ತ ಈ ರೀತಿ ಹೇಳುವೆ. ನಾನು ಸೋಲುವೆನೆಂದು ನೀನು ಕನಸುಮನಸಿನಲ್ಲಿಯೂ ತಿಳಿಯಬೇಡ."

"ತಿಳಿಯುವುದೇನು ಬಂತು ? ಹೇಳಿಯೂ ಬಿಡುವೆನು."

"ನಿನ್ನಂತಹ ಹೊಗಳು ಭಟ್ಟನಿದ್ದರೆ ಹೇಳದೆ ಏನು ಮಾಡುವೆ ? ನೀನಿರುವುದರಿಂದಲೇ ಪುರೀಷೋತ್ತಮನು ಈ ನಗರದಲ್ಲಿ ನೆಲೆಯಾಗಿರುವನು. ನಾನು ಈ ನಗರದಲ್ಲಿದ್ದಿದ್ದರೆ ಆತನು ಮೂರು ದಿನಗಳೂ ಸಹ ಇಲ್ಲಿ ಉಳಿಯುತ್ತಿರಲಿಲ್ಲ."

"ಉಳಿಯುವುದೂ ಬಿಡುವುದೂ ಮುಂದೆ ತಿಳಿಯುತ್ತದೆ. ಇನ್ನು ವಿನಾಕಾರಣ ಮಾತನಾಡಿ ನಾನು ನೀನು ಅಸಮಾದಾನ ಮಾಡಿಕೊಳ್ಳುವುದೂ ಬೇಡ."

"ಆಗಲಿ."

ಚಂದ್ರನಾಥನು ತಟಸ್ಥನಾದನು. ಪ್ರದೀಪನೂ ಮೌನನಾದನು.

ಬಹುದಿನಗಳಿಂದಲೂ ಯೋಚಿಸಿಕೊಂಡಿದ್ದ ತನ್ನ ಬಯಕೆಯು ಇಂದು ಈಡೇರಿತೆಂದು ಪ್ರದೀಪನೂ, ಪುರುಷೋತ್ತಮನೊಡನೆ ಸ್ಪರ್ಧೆಗೆ ನಿಂತು ಈತನು ಅವಮಾನಿತನಾಗುವುದು ಖಂಡಿತವೆಂದು ಚಂದ್ರನಾಥನೂ ಭಾವಿಸಿಕೊಂಡರು.

ಪ್ರದೀಪನು ತನ್ನನ್ನು ಹೀಯಾಳಿಸಿ, ಪುರುಷೋತ್ತಮನನ್ನು ಅಲ್ಲಗಳೆದು ಮಾತನಾಡಿದನೆಂದು ಚಂದ್ರನಾಥನು ಅವನ ಊಟ ಉಪಚಾರಗಳ ವಿಷಯಲ್ಲಿ ಕೊಂಚ ಮಾತ್ರವೂ ಬೇಸರಗೊಳ್ಳಲಿಲ್ಲ.

ಪುರುಷೋತ್ತಮನೊಡನೆ ಸ್ಪರ್ಧೆಗೆ ನಿಂತು, ಅವಮಾನಿತನಾದನಂತರ ಮುಂದೆ ಯಾರಲ್ಲಿಯೂ ತನ್ನ ಪ್ರತಾಪವನ್ನು ಹೇಳಿಕೊಳ್ಳದಂತೆ ಚುಚ್ಚು ಮಾತುಗಳಿಂದ ಇವನ ಮನ ನೋಯಿಸಬೇಕೆಂದುಕೊಂಡನು.

ಆ ಸಮಯದಲ್ಲಿ ಮಾತ್ರ ಯಾವ ವಿಷಯವನ್ನೇ ಆಗಲಿ, ಮಾತನಾಡಿ ಸೇಡು ತೀರಿಸಿಕೊಳ್ಳಲು ಅವಕಾಶವಿಲ್ಲವಾಯಿತು. ಮುಂದೆ ಕಾಲವು ಕೊಡ ಬಾರದೆ ಇರುವುದಿಲ್ಲವೆಂದುಕೊಂಡನು.

೩

ಪ್ರದೀಪನ ಗರ್ವವನ್ನು ಅಡಗಿಸಬೇಕೆಂಬ ಕುತೂಹಲದಿಂದಿದ್ದ ಚಂದ್ರನಾಥನು ಪುರುಷೋತ್ತಮನ ಮನೆಗೆ ಹೋದನು.

ಆ ವೇಳೆಯಲ್ಲಿ ಪುರುಷೋತ್ತಮನು ರಾಮನಾಥನೊಡನೆ ವಿನೋದವಾಗಿ ಮಾತನಾಡುತ್ತಾ ಕುಳಿತಿದ್ದನು.

ಯಾವ ಬಗೆಯ ಮುನ್ಸೂಚನೆಯೂ ಇಲ್ಲದೆ ಚಂದ್ರನಾಥನು ಏಕಾಏಕಿ ಬಂದುದನ್ನು ನೋಡಿ, ಏನೋ ವಿಶೇಷವಿರಬಹುದೆಂದುಕೊಂಡು, ಕುಳಿತುಕೊಳ್ಳಲು ಕುರ್ಚಿಯನ್ನು ತೋರಿಸಿ ಕಾರಣವನ್ನು ಕೇಳಿದನು.

ಚಂದ್ರನಾಥನು ತನಗೂ, ಪ್ರದೀಪನಿಗೂ ನಡೆದ ಸಂವಾದವನ್ನೆಲ್ಲಾ ವಿವರವಾಗಿ ಹೇಳಿದನು.

ಪ್ರದೀಪನ ಗರ್ವದ ಮಾತುಗಳನ್ನು ಕೇಳಿ ಪುರುಷೋತ್ತಮನಿಗೆ ನಗುವು ಬಂದಿತು. ರಾಮನಾಥನಿಗೆ ವಿಪರೀತ ಕೋಪ ಬಂದಿತು. ಆಗಲೇ ಅವನ ಕಣ್ಣುಗಳು ಕೆಂಪುವರ್ಣವನ್ನು ತಾಳಿದುವು.

"ನೀವು ಒಂದು ತಪ್ಪು ಕೆಲಸ ಮಾಡಿದಿರಿ."

—ಎಂದು ಚಂದ್ರನಾಥನಿಗೆ ಹೇಳಿದನು.

ಸೋಜಿಗನಾದ ಚಂದ್ರನಾಥನು—

"ಏನು ತಪ್ಪು ಕೆಲಸ ?" ಎಂದು ಕೇಳಿದನು.

"ನೀವು, ಪುರುಷೋತ್ತಮನನ್ನು ನಿನ್ನ ಸ್ಪರ್ಧೆಗೆ ನಿಲ್ಲಿಸುವೆನೆಂದು ಆತನೊಡನೆ ಹೇಳಿ ಬಂದಿರಿ, ಅದು ಸರಿ. ನನ್ನೊಡನೆ ಗುದ್ದಾಟಕ್ಕೆ ನಿಲ್ಲಬೇಕೆಂದು ಒಂದು ವಿಷಯವನ್ನು ಅವನಲ್ಲಿ ಹೇಳಿ ಮಾತು ತೆಗೆದುಕೊಂಡಿದ್ದರೆ ಸಾಕಿತ್ತು. ಅವನ ಮೂಳೆಗಳೆಲ್ಲಾ ಪುಡಿಪುಡಿಯಾಗುವಂತೆ ಒದ್ದು ಕೆಡಹುತ್ತಿದ್ದೆನು. ಆ

ಒಂದು ವಿಷಯದಲ್ಲಿ ನೀವು ತಪ್ಪು ಮಾಡಿದಿರಿ. ಆದರೂ ಚಿಂತೆಯಿಲ್ಲ. ಈಗ ಮಿಂಚಿಹೋದುದಾದರೂ ಏನಿದೆ? ಆತನಲ್ಲಿಗೆ ಹೋಗಿ ನನ್ನೊಡನೆ ಗುದ್ದಾಟದ ವಿಷಯವಾಗಿ ಸ್ಪರ್ಧೆಗೆ ನಿಲ್ಲುವಂತೆ ಹೇಳಿ. ಅವನ ಒಂದು ಕೈಯನ್ನೋ, ಕಾಲನ್ನೋ ಮುರಿದುಬಿಡುವೆನು."

ಪುರುಷೋತ್ತಮನು ನಕ್ಕು—

"ಏಕೆ ನಿನಗೀ ಸಿಟ್ಟು? ನರಿಯ ಅಟಾಟೋಪವನ್ನು ಕಂಡು ಸಿಂಹವು ಗರ್ಜಿಸಿದಂತೆ ನೀನು ಹಾರಾಡುವೆಯಲ್ಲ. ಅವನು ನಿನ್ನೊಡನೆ ಸ್ಪರ್ಧೆಗೆ ನಿಲ್ಲುವಹಾಗಿದ್ದಿದ್ದರೆ ಮೊದಲೇ ಹೇಳಿಕಳುಹಿಸುತ್ತಿದ್ದನು. ಆತನು ಹಾಗೆ ಹೇಳದೆ ಇರುವುದರಿಂದ ನಾವಾಗಿಯೇ ಆತನನ್ನು ಗುದ್ದಾಟಕ್ಕೆ ಕರೆಯುವುದು ಸರಿಯಲ್ಲ. ಆ ರೀತಿ ಕರೆಯುವುದು ನಮ್ಮ ಗೌರವಕ್ಕೆ ತಕ್ಕುದಲ್ಲ" ಎಂದನು.

ಪುರುಷೋತ್ತಮನ ಆ ಒಂದು ಮಾತಿಗೆ ರಾಮನಾಥನು ಶಾಂತನಾಗಿ ಕುಳಿತನು. ಅಂತರಂಗದಲ್ಲಿ ಕೋಪವಿದ್ದರೂ ಬಹಿರಂಗವಾಗಿ ತೋರಿಸಿ ಕೊಳ್ಳುವಹಾಗಿಲ್ಲವಾಗಿತ್ತು ಅವನ ಆಗಿನ ಸ್ಥಿತಿ.

ಪುರುಷೋತ್ತಮನು ಚಂದ್ರನಾಥನ ಕಡೆ ಮುಖ ಮಾಡಿ—

"ಈಗ ನಮ್ಮಿಂದ ಏನಾಗಬೇಕು?" ಎಂದು ಕೇಳಿದನು.

"ನಾನು ಪ್ರದೀಪನೊಡನೆ ಪ್ರತಿಜ್ಞೆ ಮಾಡಿ ಬಂದಿರುವೆನು. ಆ ನನ್ನ ಪ್ರತಿಜ್ಞೆಯನ್ನು ನೀವು ಸಾಧಿಸಬೇಕು."

"ಹೇಗೆ?"

"ಹೇಗಾದರೂ ಸರಿ."

"ಪ್ರದೀಪನು ಹೇಳಿರುವ ಬಗೆಯನ್ನು ನೋಡಿದರೆ, ನನ್ನ ಆತನ ಯುಕ್ತಿ, ಚತುರತೆ, ನೈಪುಣ್ಯತೆಯ ಸ್ಪರ್ಧೆ ಏರ್ಪಡಬೇಕಾಗಿದೆ. ಆದರೇ, ನಾನು ಅಂತಹ ವಿಷಯಗಳಿಗೆ ಕಿವಿಗೊಡುವುದೇ ಇಲ್ಲ. 'ಅಹಂಕಾರಕ್ಕೆ ಉದಾಸೀನವೇ ಮದ್ದು' ಎಂಬ ಗಾದೆಯಂತೆ ಅವನು ಏನು ಹೇಳಿದರೂ ಅವನ ಪಾಡಿಗೆ ಅವನನ್ನು ಬಿಟ್ಟಿದ್ದರೆ ಅವನ ಗರ್ವವು ತಾನಾಗಿಯೇ ಅಡಗುತ್ತಿತ್ತು. ಆದರೇ, ಆತನಲ್ಲಿ ನೀವು ಪ್ರತಿಜ್ಞೆಮಾಡಿ ಬಂದಿರುವುದರಿಂದ ನಿಮ್ಮ ಮರ್ಯಾ ದೆಯನ್ನು ಉಳಿಸುವ ಭಾರವು ನನಗೆ ಸೇರಿದೆ."

"ಅವನೊಡನೆ ಯಾವ ರೀತಿ ಸ್ಪರ್ದೆಗೆ ನಿಲ್ಲುವಿರಿ?"

"ಯಾವ ರೀತಿ ನಿಲ್ಲಬೇಕೆಂಬುದರ ಬಗ್ಗೆ ನೀವೇ ಸಲಹೆ ಕೊಡಿ."

ಚಂದ್ರನಾಥನು ಕೆಲಹೊತ್ತು ಯೋಚಿಸಿ—

"ಎಲ್ಲಿಯಾದರೂ ಕಳ್ಳತನವಾದಾಗ ಅಥವಾ ದರೋಡೆಯು ನಡೆದಾಗ, ತಪ್ಪಿದರೆ ಕೊಲೆಯು ನಡೆದರೆ ನೀವಿಬ್ಬರೂ ಏಕಕಾಲದಲ್ಲಿ ಕಳ್ಳಕೊಲೆಗಾರರ ಶೋಧನೆಗೆ ಪ್ರಾರಂಭಿಸಬೇಕು. ಯಾರು ಮೊದಲು ಅಪರಾಧಿಯನ್ನು ಹಿಡಿಯುವರೆಂದು ಆಗ ತಿಳಿಯುವುದಲ್ಲದೆ, ಬುದ್ಧಿ, ಚತುರತೆಯ ಸ್ಪರ್ಧೆಯನ್ನೂ ಏರ್ಪಡಿಸಿದಂತಾಗುತ್ತದೆ" ಎಂದು ಹೇಳಿದನು.

"ಒಂದುವೇಳೆ ಇಬ್ಬರ ಯೋಚನಾಭಿಪ್ರಾಯಗಳು ಸರಿಸಮಾನವಾಗಿ, ಅಪರಾಧಿಯನ್ನು ಒಂದೇಸಾರಿ ಹಿಡಿಯುವ ಸಂಭವ ಬಂದರೆ ?"

"ಇಬ್ಬರೂ ಸಮಾನ ಯುಕ್ತಿ, ಚತುರತೆಯ ಸಾಹಸವುಳ್ಳವರೆಂದು ತಿಳಿಯುತ್ತದೆ. ಆ ರೀತಿ ಏನಾದರೂ ನಡೆದರೆ, ಅಲ್ಲಿಗೆ ಬಿಡದೆ ಮತ್ತೊಂದು ಕೊಲೆ ಮೊಕದ್ದಮೆಗೋ, ಕಳ್ಳತನದ ಮೊಕದ್ದಮೆಗೋ ಪ್ರವೇಶಿಸಬೇಕು. ಆಗ ನಿಮ್ಮಿಬ್ಬರ ಅಂತಸ್ತು ತಿಳಿಯುತ್ತದೆ. ಸದಾಕಾಲವೂ ಇಬ್ಬರ ಮನೋಭಿಪ್ರಾಯವೂ ಒಂದೇ ರೀತಿಯಾಗಿರುವುದಿಲ್ಲ."

"ನೀವು ತಿಳಿಸಿದಂತೆ ನಡೆಯಲು ನನಗೆ ಇಷ್ಟವಿಲ್ಲ."

"ಮತ್ತೆ ಹೇಗೆ ವರ್ತಿಸಬೇಕೆಂಬುದನ್ನು ನೀವೇ ಹೇಳಿ."

"ಈಗ ಪ್ರದೀಪನೆಲ್ಲಿರುವನು ?"

"ನನ್ನ ಮನೆಯಲ್ಲಿರಬಹುದು."

'ಪೋಲೀಸ್ ಠಾಣೆಗೆ ಫೋನ್ ಮಾಡಿ, ಅಲ್ಲಿಂದ ಯಾವಿಕನೊಬ್ಬನು ನಿಮ್ಮ ಮನೆಗೆ ಹೋಗಿ, ನಿಮ್ಮ ಮನೆಯಲ್ಲಿ ಪ್ರದೀಪನಿದ್ದರೆ ಆತನನ್ನು ಕರೆದು ಕೊಂಡು ಬರುವಂತೆ ಹೇಳಿ."

"ಆತನೊಡನೆಯೋ ಮಾತನಾಡಬೇಕೇ ?"

"ಹೌದು."

ಚಂದ್ರನಾಥನು ಪೋಲೀಸ್ ಠಾಣೆಗೆ ಫೋನ್ ಮಾಡಿ, ಎಂದಿನಂತೆ ಯಥಾಸ್ಥಾನದಲ್ಲಿ ಕುಳಿತನು.

ಕೆಲಹೊತ್ತು ಸುಮ್ಮನಿದ್ದು ಬಳಿಕ ಚಂದ್ರನಾಥನು—

"ಆತನೊಡನೆ ಏನು ವಿಷಯ ಮಾತನಾಡುವಿರಿ ?" ಎಂದು ಕೇಳಿದನು.

"ಸ್ಪರ್ಧೆಯ ವಿಷಯವಾಗಿ ಮಾತನಾಡುವೆನು."

"ನಿಮ್ಮ ಮಾತು ನ್ಯಾಯವೇ. ನೇರವಾಗಿ ಆತನೊಡನೆಯೇ ಮಾತನಾಡುವುದು ಉತ್ತಮ."

ಪುರುಷೋತ್ತಮನು ಪುನಃ ಮಾತನಾಡದೆ, ಇಬ್ಬರನ್ನೂ ಹೊರಗೆ ಕರೆದುಕೊಂಡು ಬಂದು, ಹೊರಗಡೆಯಿದ್ದ ಜಗಲಿಯ ಮೇಲೆ ಕುಳಿತನು. ಆ ಸ್ಥಳದಲ್ಲಿ ಪ್ರದೀಪನ ವಿಷಯವಾಗಿ ಮಾತುಕತೆಯೇನೂ ನಡೆಯಲಿಲ್ಲ.

ಮೂವರೂ ಪ್ರದೀಪನ ನಿರೀಕ್ಷೆಯಲ್ಲಿ ಕುಳಿತರು.

ಕೆಲಹೊತ್ತಿನಲ್ಲಿಯೇ ಯಾಮಿಕನ ಸಂಗಡ ಪ್ರದೀಪನು ಅಲ್ಲಿಗೆ ಬಂದನು.

ತಾನು ಪುರುಷೋತ್ತಮನನ್ನು ಹೀಯಾಳಿಸಿದ ವಿಷಯವನ್ನು ಚಂದ್ರನಾಥನು ಆವನಲ್ಲಿ ತಿಳಿಸಿರುವನು. ಆ ಪ್ರಯುಕ್ತ ಆತನು ತನ್ನನ್ನು ಕರೆಯಿಸಿರುವನು. ಎಂದು ಪ್ರದೀಪನು ಭಾವಿಸಿದ್ದನಲ್ಲದೆ, ಪುರುಷೋತ್ತಮನಿಗೂ ತನಗೂ ಬಿರುಸಾದ ಮಾತುಕತೆಗಳಾಗುವುದೆಂದುಕೊಂಡನು.

ಪ್ರದೀಪನ ರೌದ್ರಾಕಾರದ ಗಂಭೀರ ಮುಖ, ಪಾಳೆಯಗಾರನಿಗಿರುವಂತಿದ್ದ ಮೀಸೆ, ದಷ್ಟಪುಷ್ಟವಾದ ಶರೀರ, ಗಂಭೀರವಾದ ನಡಿಗೆಯನ್ನು ನೋಡಿ ಪತ್ತೇದಾರರೂ ತನ್ಮಯಚಿತ್ತರಾದರು.

ಪ್ರದೀಪನು ಸಮೀಪಕ್ಕೆ ಬರುತ್ತಲೇ ಪುರುಷೋತ್ತಮನು ಎದ್ದು ಬಹುದಿನದ ಪರಿಚಯವುಳ್ಳವನಂತೆ ವಿಶ್ವಾಸದಿಂದ ಮಾತನಾಡಿಸಿ, ಹಸ್ತಲಾಘವವನ್ನಿತ್ತು ಒಳಗೆ ಕರೆದುಕೊಂಡು ಹೋದನು.

ಪುರುಷೋತ್ತಮನ ಆಗಿನ ನಡವಳಿಕೆಯನ್ನು ನೋಡಿ ಪ್ರದೀಪನು ಆಶ್ಚರ್ಯಚಕಿತನಾದನು. ಮಾತನಾಡಲು ಅವನಿಗೆ ನಾಲಿಗೆಯೇ ಹೊರಳದಂತಾಯಿತು. ಚಂದ್ರನಾಥನ ಬಳಿಯಲ್ಲಿ ಪುರುಷೋತ್ತಮನನ್ನು ಹೀಯಾಳಿಸಿ ಮಾತನಾಡಿದುದನ್ನು ಜ್ಞಾಪಕಕ್ಕೆ ತಂದುಕೊಂಡು ಪಶ್ಚಾತ್ತಾಪಗೊಂಡನು.

ಆ ಪಶ್ಚಾತ್ತಾಪವೇ '**ಪ್ರದೀಪನ ಪರಾಭವ**'ಕ್ಕೆ ಪ್ರಾರಂಭದ ಮೆಟ್ಟಲು.

ಒಳಗೆ ಹೋದ ನಾಲ್ವರೂ ಟೇಬಲಿನ ಸುತ್ತಲೂ ಕುಳಿತರು.

ಬಳಿಕ ಪುರುಷೋತ್ತಮನು ಪ್ರದೀಪನಿಗೆ—

"ನಿಮ್ಮ ವಿಷಯವನ್ನೆಲ್ಲಾ ಚಂದ್ರನಾಥರಿಂದ ಕೇಳಿ ತಿಳಿದೆನು. ನಿಮ್ಮ ಸಂಗಡ ಸ್ಪರ್ಧೆಗೆ ನಿಲ್ಲಲು ನನಗೆ ಮನಸ್ಸಿಲ್ಲವಾದರೂ, ನಿಮ್ಮ ಅಟಾಟೋಪದ ಮಾತುಗಳನ್ನು ಕೇಳಿ, ಈ ಚಂದ್ರನಾಥರ ಬಲೋದ್ಧಂಥದಿಂದ ನಿಮ್ಮೊಡನೆ ಸ್ಪರ್ಧೆಗೆ ನಿಲ್ಲಲು ಮನಗೊಟ್ಟೆನು. ಯಾವ ರೀತಿ ಸ್ಪರ್ಧೆ ಏರ್ಪಡಬೇಕೆಂದು ನೀವೇ ಹೇಳಿ?" ಎಂದು ಕೇಳಿದನು.

ಪ್ರದೀಪನು ಗಂಭೀರಭಾವದಿಂದಲೇ—

"ನೀವೇ ಹೇಳಿ." ಎಂದನು.

"ನಾನು ಹೇಳಿದುದಕ್ಕೆ ನೀವು ಒಪ್ಪುವಿರಾದರೆ ಹೇಳುವೆನು. ಇಲ್ಲದೇ ಹೋದರೆ ನೀವೇ ಹೇಳಿ. ನೀವು ಹೇಳಿದಂತೆ ನಾನು ಒಪ್ಪುವೆನು. ಬದಲು ಮಾತನಾಡುವುದಿಲ್ಲ,"

ಪ್ರದೀಪನು ಕ್ಷಣಹೊತ್ತು ಯೋಚಿಸಿ—

"ನೀವೇ ಹೇಳಿ. ನಾನು ಒಪ್ಪುವೆನು" ಎಂದನು.

ಪುರುಷೋತ್ತಮನು, ಚಂದ್ರನಾಥನು ಹೇಳಿದ್ದ ಸ್ಪರ್ಧೆಯ ವಿಷಯವನ್ನು ಹೇಳಿ—

"ಅದು ನನ್ನ ಮನಸ್ಸಿಗೆ ಒಪ್ಪಲಿಲ್ಲ. ಒಂದುವೇಳೆ ನಿಮ್ಮ ಮನಸ್ಸಿಗೆ ಒಪ್ಪಿದರೆ ನಾನು ಅಡ್ಡಿಪಡಿಸಲಾರೆ. ಅದಕ್ಕೂ ಸಿದ್ಧನಿರುವೆನು, ಇದಕ್ಕೆ ನಿಮ್ಮ ಅಭಿಪ್ರಾಯವೇನು ಹೇಳಿ ? " ಎಂದು ಕೇಳಿದನು.

"ನನಗೂ ಸಹ ಇಷ್ಟವಿಲ್ಲ. ನಿಮ್ಮ ಮನದ ಉದ್ದೇಶವೇನೆಂಬುದನ್ನು ಹೇಳಿ. ಅದಕ್ಕೆ ನಾನು ತಯಾರಿರುವೆನು."

—ಎಂದು ಪ್ರದೀಪನು ಹೇಳಿದನು.

"ನೀವು ವೇಷ ಧರಿಸುವುದರಲ್ಲಿ ಚತುರರಿರುವಿರೆಂದು ಕೇಳಿರುವೆನು. ನಾವೂ ಸಹ ವೇಷ ಧರಿಸುವುದರಲ್ಲಿ ಅಲ್ಪಸ್ವಲ್ಪ ನಿಪುಣರಾಗಿರುವೆವು. ನೀವು ಯಾವ ವೇಷದಿಂದಲಾದರೂ ಸರಿ, ಯಾವ ಬಗೆಯಿಂದಲಾದರೂ ಸರಿ, ನಮ್ಮನ್ನು ಮೋಸಪಡಿಸಿ. ತಪ್ಪಿದರೆ ನಾವು ನಿಮ್ಮನ್ನು ಮೋಸಪಡಿಸುವೆವು. ಇದರಲ್ಲಿ ನಮ್ಮ ನಿಮ್ಮ ವಿದ್ಯಾಚತುರತೆಯು ಬೆಳಕಿಗೆ ಬರಲಿ. ಇದಕ್ಕೆ ನಿಮ್ಮ ಅಭಿಪ್ರಾಯವೇನು ಹೇಳಿ ? "

ಪ್ರದೀಪನು ಯೋಚನೆಗೊಳಗಾದನು. 'ನಾನು ಮೋಸ ಪಡಿಸುವೆನೆಂದರೆ ಇವರು ಸದಾ ಎಚ್ಚರಿಕೆಯಿಂದಿರುವರು. ನಾನು ಯಾವ ವೇಷದಲ್ಲಿ ಬಂದರೂ ಗುರುತು ಹಿಡಿಯಬಹದು. ಆ ರೀತಿ ಗುರುತು ಹಿಡಿದರೆ ನಾನು ಅವಮಾನಿತನಾಗಬೇಕಾಗುವುದು. ಆದ್ದರಿಂದ ಇವರನ್ನೇ ಮೋಸಪಡಿಸಲು ಹೇಳಿ, ನಾನು ವಿಶೇಷ ಎಚ್ಚರಿಕೆ ವಹಿಸುವೆನು. ಇವರು ನನಗೆ ಯಾವ ಬಗೆಯಲ್ಲಿಯೇ ಆಗಲಿ ಮೋಸ ಪಡಿಸಲು ಯತ್ನಿಸಿದಾಗ ಅವರನ್ನು ಕಂಡುಹಿಡಿದು ಅವಮಾನಪಡಿಸುವೆನು ಹೇಗೂ ಪಂಥವನ್ನು ಕಟ್ಟಿಕೊಂಡಿದ್ದಾಯಿತು. ನೀರಿನಲ್ಲಿ ಮುಳುಗಿದವನಿಗೆ ಚಳಿಯೇನು? ಮಳೆಯೇನು? ಎಂಬ ಗಾದೆಯಂತೆ ಪಂಥ ಮಾಡಿ ಹಿಂಜರಿಯುವುದೆಂದರೇನು? ಆದುದಾಗಲಿ' ಎಂಬುದಾಗಿ ಯೋಚಿಸಿಕೊಂಡನು.

ಮೂವರೂ ಪ್ರದೀಪನ ಮುಖವನ್ನೇ ನೋಡುತ್ತಾ ಅವನ ಉತ್ತರವನ್ನು ನಿರೀಕ್ಷಿಸುತ್ತಿದ್ದರು.

ಯೋಚಿಸಿ ನಿರ್ಧರಕ್ಕೆ ಬಂದ ಪ್ರದೀಪನು—

"ನೀವೇ ನನ್ನನ್ನು ಮೋಸಪಡಿಸಿ" ಎಂದನು.

"ಯಾವ ರೀತಿ ಮೋಸ ಪಡಿಸಬೇಕು?"

"ಯಾವ ರೀತಿಯಿಂದಲಾದರೂ ಸರಿ, ನಿಮ್ಮ ಮನಸ್ಸಿಗೆ ತೋಚಿದಂತೆ ಮಾಡಿ. ನಾನು ಬೇಡವೆನ್ನುವುದಿಲ್ಲ."

"ಹಗಲು ವೇಳೆಯಲ್ಲಿಯೇ? ಅಥವಾ ರಾತ್ರಿಯ ವೇಳೆಯಲ್ಲಿಯೇ?"

"ಯಾವ ವೇಳೆಯಲ್ಲಿ ಬೇಕಾದರೂ ಆಗಬಹುದು. ಆ ವಿಷಯವಾಗಿ ನಾನೇನು ಅಡ್ಡಿ ಬರಲಾರೆ."

"ಅಂತರಂಗವಾಗಿ ಮೋಸ ಮಾಡಬೇಕೇ? ಅಥವಾ ಬಹಿರಂಗವಾಗಿಯೇ?"

"ನಿಮಗೆ ಯಾವ ರೀತಿ ಅನುಕೂಲವಾಗುತ್ತದೆಯೋ ಆ ರೀತಿ ಮಾಡಬಹುದು."

"ವೇಷಾಂತರದಿಂದ ಮೋಸ ಮಾಡಬೇಕೇ? ಅಥವಾ ನಿಜ ವೇಷದಲ್ಲಿ ಮಾಡಬೇಕೇ?"

"ಅದೂ ಸಹ ನಿಮ್ಮ ಇಷ್ಟ."

“ಈ ನಗರದಲ್ಲಿಯೇ ನಮ್ಮ ವಿದ್ಯೆಯನ್ನು ತೋರಿಸಬೇಕೇ? ಅಥವಾ ನಿಮ್ಮ ಊರಿಗೆ ಬರಬೇಕೇ? ತಪ್ಪಿದರೆ ನೀವು ಬೇರೆ ಯಾವುದಾದರೂ ಊರಿಗೆ ಹೋದಾಗ ಅಲ್ಲಿಗೆ ಬಂದು ನಮ್ಮ ವಿದ್ಯೆಯನ್ನು ತೋರಿಸಬೇಕೇ? ಹೇಳಿ.”

“ಇದೇನು ಹೀಗೆ ಕೇಳುವಿರಿ? ಪ್ರತಿಯೊಂದು ಅಂಶವನ್ನೂ ಕೇಳಿ ಅದ ರಂತೆ ನಡೆದುಕೊಳ್ಳಬೇಕೆಂಬ ಅಭಿಲಾಷೆಯಿರುವಂತೆ ತೋರುತ್ತದೆ. ಸರಿ! ನಿಮ್ಮ ನಿಷ್ಟಕ್ಕೆ ನಾನೇಕೆ ವಿರುದ್ಧವಾಗಿ ವರ್ತಿಸಲಿ? ಯಾವ ಊರಿನಲ್ಲಿ ಬೇಕಾದರೂ ನನ್ನನ್ನು ಮೋಸ ಪಡಿಸಬಹುದು.”

“ಆಗಲಿ. ನಿಮ್ಮ ಮನೆಯಲ್ಲಿ ನಮ್ಮ ವಿದ್ಯೆಯನ್ನು ತೋರಿಸಬೇಕೇ? ಅಥವಾ ಬೇರೆಯವರ ಮನೆಯಲ್ಲಿ ತೋರಿಸಬೇಕೇ? ತಪ್ಪಿದರೆ ಮಾರ್ಗದಲ್ಲಿ ನಮ್ಮ ವಿದ್ಯಾಚತುರತೆಯುನ್ನು ಪ್ರದರ್ಶಿಸಬೇಕೇ?”

“ನೀವು ಕೇಳುವ ಪ್ರತಿಯೊಂದು ಪ್ರಶ್ನೆಯೂ ಆಶ್ಚ್ಯಾರ್ಯಕರವಾಗಿದೆ.”

“ಹೌದು, ಆಶ್ಚರ್ಯವೇ! ಆದಕ್ಕೆ ಕಾರಣವಿದೆ. ಏನೆಂದರೆ—ನಾವು ನಮ್ಮ ಇಷ್ಟದಂತೆ ನಡೆದು ನಿಮ್ಮನ್ನು ಮೋಸಪಡಿಸಬೇಕೆಂಬ ಅಭಿಲಾಷೆಯಿಲ್ಲ. ಅದಕ್ಕಾಗಿ ನಿಮ್ಮನ್ನು ಕೇಳುತ್ತಿರುವುದು. ನೀವು ಯಾವುದನ್ನು ಹೇಳುವಿರೋ, ಅದೇ ಪ್ರಕಾರ ನಮ್ಮ ವಿದ್ಯಾ ಪ್ರೌಢಿಮೆಯನ್ನು ತೋರಿಸಿ ನಿಮ್ಮನ್ನು ಬೆರಗು ಗೊಳಿಸುವೆವು. ಆಗಬಹುದೇ?”

“ನಿಮಗೆ ಅಷ್ಟು ಸಾಮರ್ಥ್ಯವಿರುವುದೇ?”

“ಇರುವುದೂ ಇಲ್ಲದ್ದೂ ಮುಂದೆ ತಿಳಿಯುತ್ತದೆ. ನಿಮ್ಮ ಅಭಿಪ್ರಾಯ ವೇನು ಹೇಳಿ.”

“ನಾನು ಹೇಳಿದಂತೆಯೇ ನಡೆದುಕೊಳ್ಳುವಿರಾ?”

“ಅಗತ್ಯವಾಗಿ. ಆದರೆ, ನಾವಿಬ್ಬರಿರುವುದು ನಿಮಗೆ ತಿಳಿದೇ ಇದೆ. ನಾವಿಬ್ಬರೂ ಸೇರಬೇಕೆಂದರೂ ಸೇರುವೆವು. ತಪ್ಪಿದರೆ ನಾನೊಬ್ಬನೇ ಬೇಕಾ ದರೂ ನನ್ನ ಕೆಲಸ ತೋರುವೆನು. ಇದಕ್ಕೆ ನೀವೇನು ಹೇಳುವಿರಿ?”

“ನೀವಿಬ್ಬರು ಸೇರಿದರೂ ನನ್ನನ್ನು ಮೋಸಪಡಿಸಲಾರಿರೆಂದು ನಿಸ್ಸಂದೇಹ ವಾಗಿ ಹೇಳುವೆನು.”

"ಈಗ ಬಾಯಿಮಾತಿನಲ್ಲಿ ಹೇಳಿ ಪ್ರಯೋಜನವಿಲ್ಲ. ಆಡುವುದು ಸುಲಭ, ಮಾಡುವುದು ಕಷ್ಟವೆಂದು ಸಾಮಾನ್ಯವಾಗಿ ಎಲ್ಲರಿಗೂ ತಿಳಿದೇ ಇದೆ. ನಾವು ಮೋಸ ಮಾಡಿದ ಮೇಲಲ್ಲವೇ ನಿಮಗೆ ತಿಳಿಯುವುದು. ನಿಮ್ಮ ಉದ್ದೇಶವೇನಿದೆಯೆಂಬುದನ್ನು ಮೊದಲು ಹೇಳಿ ? "

"ಸರಿ ! ನಾನು ಯಾವ ರೀತಿ ಹೇಳುವೆನೋ, ಆ ರೀತಿ ನನ್ನನ್ನು ಮೋಸ ಪಡಿಸುವಿರಾ ಹೇಳಿ ? "

"ಅಗತ್ಯವಾಗಿ. ಆದರೇ, ಮಾನವಮಾತ್ರದವರಿಂದ ಆಗುವ ಕಾರ್ಯ ವಾಗಿರಬೇಕು. ತಿಳಿಯಿತೇ ? "

"ನೀವು ವೇಷಧರಿಸುವುದರಲ್ಲಿ ಮಹಾ ನಿಪುಣರೆಂದು ಕೇಳಿರುವೆನು. ಆದ್ದರಿಂದ ನನಗೆ ವೇಷಾಂತರದಿಂದ ಬಹಿರಂಗವಾಗಿ ಮೋಸಗೊಳಿಸಿರಿ."

"ಆಗಬಹುದು. ಸ್ನೇಹಿತ, ಶತ್ರು, ಕಳ್ಳದರೋಡೆಕೋರ, ಕೊಲೆಗಾರ, ಸೇವಕ, ಸಾಹುಕಾರ, ಬಿಕ್ಷುಕ, ಕುಂಟ, ಕುರುಡ ಈ ವೇಷಗಳಲ್ಲಿ ಯಾವುದಾದರೊಂದು ವೇಷವನ್ನು ಧರಿಸಿ ನಿಮ್ಮನ್ನು ಮೋಸಗೊಳಿಸುವೆವು. ಆಗಬಹುದೇ ? "

"ಆಗಲಿ, ನೀವು ಯಾವ ವೇಷವನ್ನು ಧರಿಸಿಕೊಂಡು ಬಂದರೂ ಸರಿ, ನಾನು ನಿಮ್ಮನ್ನು ಗುರುತಿಸುವೆನಲ್ಲದೇ, ಆಗಲೇ ನಿಮ್ಮ ಮರ್ಯಾದೆಯನ್ನು ಕಳೆಯುವೆನು."

"ಆಗಲಿ. ನಮ್ಮನ್ನು ಗುರುತಿಸಿದ ಮೇಲಲ್ಲವೇ ನಮ್ಮ ಮರ್ಯಾದೆ ಕಳೆಯುವುದು ? "

"ಖಂಡಿತಾ ಮರ್ಯಾದೆ ಹೋಗುವುದೆಂದೇ ಭಾವಿಸಿ. ಯಾವ ವೇಷದಿಂದಲೇ ಆಗಲಿ, ನನ್ನನ್ನು ಮೋಸಪಡಿಸಲಾರಿರಿ. ಆದರೇ, ಒಂದು ವಿಷಯ."

"ಏನು ? "

"ಇದಕ್ಕೆ ಪಂದ್ಯವೇನು ? "

ಪಂದ್ಯವೆಂಬ ಮಾತನ್ನು ಕೇಳಿ ಪುರುಷೋತ್ತಮನಿಗೆ ಕೋಪ ಬಂದಿತು. ಈತನು ತಾಳ್ಮೆ ತಪ್ಪಿ ಮಾತನಾಡುತ್ತಿರುವನು. ಆದ್ದರಿಂದ ಇವನ ಗರ್ವವನ್ನು ಬೇರು ಸಹಿತ ಕಿತ್ತುಹಾಕಬೇಕೆಂದುಕೊಂಡನು.

ರಾಮನಾಥನಿಗೂ ಸಹ ಕೋಪವುಂಟಾಯಿತು. ಪುರುಷೋತ್ತಮನಂತೆ ಆತನು ಸಿಟ್ಟನ್ನು ತಡೆದುಕೊಳ್ಳಲಸಮರ್ಥನಾದನು.

ಪಂದ್ಯದ ವಿಷಯವಾಗಿ ಪುರುಷೋತ್ತಮನು ಉತ್ತರವೀಯುವ ಮೊದಲೇ ರಾಮನಾಥನು ಸಿಟ್ಟಿನಿಂದಲೇ—

"ನಾವು ಸೋತರೆ ಅಂದಿನಿಂದಲೇ ಈ ಪತ್ತೇದಾರಿ ಕೆಲಸಕ್ಕೆ ರಾಜೀನಾಮೆ ಕೊಡುವೆವು. ಈವರೆವಿಗೆ ನಮಗೆ ದೊರಕಿರುವ ಬಿರುದುಬಾವಲಿಗಳನ್ನು ನಿಮಗೆ ಕೊಟ್ಟು, ಪತ್ತೇದಾರಿಕೆಯಲ್ಲಿ ನಮಗಿಂತಲೂ ನೀವೇ ಹೆಚ್ಚಿನವರೆಂದು ಸಾರುವೆವು. ನಮ್ಮ ಪಂದ್ಯವಾಯಿತು. ನೀವು ಸೋತರೆ ಏನು ಮಾಡುವಿರಿ?" ಎಂದು ಕೇಳಿದನು.

ರಾಮನಾಥನ ಭೀಷಣ ಪ್ರತಿಜ್ಞೆಯನ್ನು ಕೇಳಿ ಪುರುಷೋತ್ತಮ, ಚಂದ್ರನಾಥರು ವಿಸ್ಮಿತರಾದರು. ಆತನಾಡಿದ ಮಾತನ್ನು ಹಿಂತೆಗೆದುಕೊಳ್ಳುವ ಸ್ಥಿತಿಯಲ್ಲಿಲ್ಲ.

ರಾಮನಾಥನ ರೋಷಭೀಷಣದ ಮಾತಿಗೆ ಪ್ರದೀಪನೂ ಬೆರಗಾಗಿ ತಲ್ಲಣಿಸಿದನು. ಆತನ ಪ್ರತಿಜ್ಞೆಯ ಪ್ರತೀಕಾರವಾಗಿ ತಾನೇನು ಪ್ರತಿಜ್ಞೆ ಮಾಡಬೇಕೆಂಬುದರ ಬಗ್ಗೆ ಯೋಚನೆಯೇ ಹೊಳೆಯಲಿಲ್ಲ.

ಕೆಲಹೊತ್ತು ಯೋಚಿಸಿ—

"ನನ್ನ ಪ್ರತಿಜ್ಞೆಯನ್ನೂ ನೀವೇ ಹೇಳಿ?" ಎಂದನು.

ರಾಮನಾಥನೇ ಪುನಃ—

"ನಾನು ಹೇಳಿದಂತೆ ನಡೆಯುವಿರಾ?" ಎಂದು ಕೇಳಿದನು.

"ನಡೆಯುವೆನು."

"ಅನಂತರ ತಪ್ಪಬೇಡಿ."

"ತಪ್ಪುವುದಿಲ್ಲ."

"ನಿಮ್ಮ ಕೆಲಸಕ್ಕೆ ರಾಜೀನಾಮೆಯನ್ನಿತ್ತು ನಮಗೆ ದಾಸರಾಗಿರಬೇಕು."

ರಾಮನಾಥನ ಮಾತನ್ನು ಕೇಳಿ ಪ್ರದೀಪನು ತಲ್ಲಣಿಸಿಹೋದನು. ಆದರೇ, ಅದಕ್ಕೆ ವಿರುದ್ಧವಾಗಿ ವರ್ತಿಸುವ ಹಾಗಿಲ್ಲ.

ರಾಮನಾಥನು ಪ್ರದೀಪನಿಗೆ ಹೇಳಿದ ಪಂದ್ಯವನ್ನು ಕೇಳಿ ಚಂದ್ರನಾಥ, ಪುರುಷೋತ್ತಮರೂ ಬೆರಗಾದರು.

ಪ್ರದೀಪನು ರಾಮನಾಥನ ಪ್ರಶ್ನೆಗೆ ಕೂಡಲೇ ಉತ್ತರವೀಯಲಿಲ್ಲ. ಕೆಲಹೊತ್ತು ಯೋಚನೆಗೊಳಗಾದನು. ತರುವಾಯ ಅವನ ಮೈ ರಕ್ತವೂ ಬಿಸಿಯಾಯಿತು.

ರಾಮನಾಥನ ಮುಖವನ್ನೇ ನೋಡುತ್ತಾ—

"ನಾನು ಹೇಳಿದಂತೆಯೇ ನನ್ನನ್ನು ಮೋಸಪಡಿಸುವಿರಾ ?" ಎಂದು ಕೇಳಿದನು.

ರಾಮನಾಥನು ತನ್ನ ಗಂಭೀರಧ್ವನಿಯಿಂದಲೇ —

"ಅದರಲ್ಲಿ ಸಂದೇಹಪಡಬೇಕಾದ ಕಾರಣವೇ ಬೇಡ. ನೀವು ಹೇಳಿದಂತೆಯೇ ನಡೆಯುವೆವಲ್ಲದೆ ಅದಕ್ಕೆ ತಪ್ಪಿ ನಡೆಯುವುದಿಲ್ಲ." ಎಂದು ಹೇಳಿದನು.

"ಹಾಗಿದ್ದಮೇಲೆ ನೀವು ಹೇಳಿದ ಪಂಥಕ್ಕೆ ನಾನು ತಯಾರಿರುವೆನು. ತಪ್ಪುವುದಿಲ್ಲ."

"ಈಗ ಎಲ್ಲಾ ಸರಿಹೋಯಿತು. ಪತ್ತೇದಾರಿಕೆಯಲ್ಲಿ ನೀವಿರಬೇಕು, ತಪ್ಪಿದರೆ ನಾವಿರಬೇಕು. ನಿಮ್ಮ ಗರ್ವವಡಗಬೇಕು, ಇಲ್ಲದೇಹೋದರೆ ನಾವು ಪತ್ತೇದಾರಿಯನ್ನು ಬಿಟ್ಟು ವಿಶ್ರಾಂತಿ ತೆಗೆದುಕೊಳ್ಳಬೇಕು. ನೀವು ಸೋತರೆ ನಿಮ್ಮ ಹೆಸರು ಅಲ್ಲಿಗೇ ಮುಳುಗಿಹೋದಂತೆಯೇ. ನಾವು ಸೋತರೆ ನಮ್ಮ ಕೀರ್ತಿಯನ್ನು ಬೆಳಗಿಸಲು ವಿಜಯಕೇಸರಿ, ಶೂರವಿಜಯರಿಗುವರು. ನಾವು ರಾಜೀನಾಮೆಯನ್ನು ಕೊಡುತ್ತಲೇ ನಮ್ಮ ಕಾರ್ಯವನ್ನು ಅವರಿಬ್ಬರೂ ಮುಂದುವರಿಸಿಕೊಂಡು ಹೋಗುವರು. ಆದ್ದರಿಂದ ನಮಗೆ ಯಾವ ವಿಧದಲ್ಲಿಯೂ ಭಯವೆಂಬುದು ಲೇಶಮಾತ್ರವೂ ಇಲ್ಲ. ಮುಂದೆ ಜಯಾಪಜಯಗಳು ದೈವಾಧೀನ. ಆದುದಾಗಲಿ."

"ಏನಾಗಬೇಕೋ ಅದು ಆಗಿಯೇ ಆಗುತ್ತದೆ. ಆಗದಿರುವುದನ್ನು ಮಾಡುವರಾದರೂ ಯಾರು ? ಏನಾಗುವುದೋ ಏನೋ, ನಾನೂ ನೋಡಿಯೇ ಬಿಡುವೆನು."

"ನೋಡುವುದೇನು ? ಅನುಭವಿಸಬೇಕಾಗುತ್ತದೆ."

"ಆಗಲಿ ! ಯಾರು ಅನುಭವಿಸುವರೆಂಬುದು ಮುಂದೆ ತಿಳಿಯುತ್ತದೆ. ಈಗ ಸುಮ್ಮನೆ ವಾದಮಾಡಿ ಫಲವೇನು ?"

ಮಾತಿಗೆ ಮಾತು ಬೆಳೆದು ಇನ್ನು ಹೆಚ್ಚಿನ ಪ್ರಮಾದಕ್ಕೆ ಕಾರಣವಾಗುವುದೆಂದು ಭಾವಿಸಿ ಪುರುಷೋತ್ತಮನು ಇಬ್ಬರನ್ನೂ ಸಮಾಧಾನ ಪಡಿಸಿದನು.

ಚಂದ್ರನಾಥನು ಪ್ರದೀಪನನ್ನು ಕರೆದುಕೊಂಡು, ಪುರುಷೋತ್ತಮನಿಂದ ಬೀಳ್ಕೊಂಡು, ಹೊರಗೆ ತನ್ನ ನಿರೀಕ್ಷೆಯಲ್ಲಿಯೇ ಇದ್ದ ಯಾಮಿಕನೊಡನೆ ಹೊರಟು ಹೊದನು.

ಅವರು ಹೊರಟುಹೋದನಂತರ ಪತ್ತೇದಾರರು ಪ್ರದೀಪನ ಗರ್ವವನ್ನು ಯಾವರೀತಿ ಅಡಗಿಸಬೇಕೆಂಬುದರ ಬಗ್ಗೆ ಸುಮಾರು ಎರಡು ಘಂಟೆಗಳ ಕಾಲ ಮಾತನಾಡಿಕೊಂಡರು.

೪

ಪತ್ತೇದಾರರೊಡನೆ ಪ್ರತಿಜ್ಞೆ ಮಾಡಿದ ಪ್ರದೀಪನು ಎರಡು ದಿನಗಳ ನಂತರ ಜಗದೀಶಪುರಕ್ಕೆ ಹಿಂದಿರುಗಿದನು.

ಪತ್ತೇದಾರರು ವೇಷಾಂತರದಿಂದ ಜಗದೀಶಪುರಕ್ಕೆ ಬರಬಹುದು. ತನಗೆ ಅವಮಾನ ಪಡಿಸುವವರೆವಿಗೂ ಈ ಊರಿನಲ್ಲಿಯೇ ನೆಲೆಯಾಗಿ ನಿಲ್ಲಬಹುದು. ಆದ್ದರಿಂದ ತಾನು ವಿಶೇಷ ಎಚ್ಚರಿಕೆಯಿಂದಿರಬೇಕೆಂದು ಯೋಚಿಸಿ ಹಗಲು ರಾತ್ರಿಗಳೆನ್ನದೆ ಎಲ್ಲಾ ಸಮಯದಲ್ಲಿಯೂ ಜಾಗರೂಕನಾಗಿದ್ದರು.

ಯಾರಾದರೂ ಸರಿ, ಆತನನ್ನು ನೋಡುವುದಕ್ಕೆ ಬಂದರೆ ಮೊದಲು ತನ್ನ ಸಂಶಯವು ನಿವೃತ್ತಿಯಾಗುವವರೆವಿಗೂ ಅವರನ್ನು ಪರೀಕ್ಷಿಸಿ ಅನಂತರ ಮಾತನಾಡುತ್ತಿದ್ದನು.

ಆತನ ನಡವಳಿಕೆಯೇ ವ್ಯತ್ಯಾಸವಾಯಿತು.

ಪರಊರಿನಿಂದ ಆತನ ನೆಂಟರಿಷ್ಟರು ಬಂದರೆ, ಏಕಾಏಕಿ ಅವರನ್ನು ನಂಬುತ್ತಿರಲಿಲ್ಲ. ಪುರುಷೋತ್ತಮನೇನಾದರೂ ಈ ವೇಷದಲ್ಲಿ ಬಂದಿರಬಹುದೇ? ಹೇಗೆಂದು ಭಾವಿಸಿ, ತನ್ನ ಅನುಮಾನವನ್ನು ಪರಿಹರಿಸಿಕೊಳ್ಳುವ ನಿಮಿತ್ತ ಬಹುಕಾಲದ ಹಿಂದೆ ನಡೆದ ಒಂದೆರಡು ವಿಷಯಗಳನ್ನು ಅವರೊಡನೆ ಕೇಳಿ ತಿಳಿದುಕೊಂಡು ಬಳಿಕ ಈ ಮನುಷ್ಯನು ವೇಷಧಾರಿ ಪತ್ತೇದಾರರಲ್ಲವೆಂದುಕೊಳ್ಳುತ್ತಿದ್ದನು.

ಪ್ರದೀಪನ ಇತ್ತೀಚಿನ ನೂತನ ನಡವಳಿಕೆಯನ್ನು ನೋಡಿದವರೆಲ್ಲರೂ ಆಶ್ಚರ್ಯಗೊಳ್ಳುತ್ತಿದ್ದರು. ಅವನೊಡನೆ ವಿಶೇಷ ಸಲಿಗೆಯಿಂದಿದ್ದವರು ಆ ವಿಷಯವಾಗಿ ಪ್ರಸ್ತಾಪ ಮಾಡಿದರೆ ಪ್ರದೀಪನು ಸರಿಯಾದ ಉತ್ತರವೀಯುತ್ತಿರಲಿಲ್ಲ.

ರಾತ್ರಿಯ ಸಮಯದಲ್ಲೇನಾದರೂ ಪತ್ತೇದಾರರು ವೇಷಾಂತರದಿಂದ ಬರಬಹುದೆಂಬ ಭ್ರಾಂತಿಯಿಂದ, ರಾತ್ರಿಯೂ ಸಹ ವಿಶೇಷ ಜಾಗರೂಕನಾಗಿರುತ್ತಿದ್ದನು.

ಒಂದೊಂದು ಸಾರಿ ಕನಸಿನಲ್ಲಿ ಬೆಚ್ಚಿಬೀಳುತ್ತಿದ್ದನು.

ತನ್ನ ಪತ್ನಿಯಿದ್ದರೆ ತನ್ನ ಕಾರ್ಯಕ್ಕೆ ಭಂಗವುಂಟಾಗಬಹುದೋ ಏನೋ ಎಂಬ ಭಾವನೆಯಿಂದ ಆಕೆಯನ್ನು ಅವಳ ತೌರುಮನೆಗೆ ಕಳುಹಿಸಿದನು. ಮೇಲಾಗಿ ಆಕೆಗೆ ಹೆರಿಗೆ ಕಾಲವೂ ಸಮೀಪಿಸಿತ್ತು.

ಪತ್ತೇದಾರರಿಗೆ ಅವಮಾನ ಮಾಡುವ ಯೋಚನೆಯು ಸದಾ ಅವನ ಮನದಲ್ಲಿ ನೆಟ್ಟುಹೋಗಿದ್ದುದರಿಂದ ಇತರ ಕೆಲಸಕಾರ್ಯಗಳಲ್ಲಿ ಉದಾಸೀನನಾದನು.

ಇತರ ಪೋಲೀಸ್ ಅಧಿಕಾರಿಗಳು ಎಂದಿನಂತೆ ತಮ್ಮ ತಮ್ಮ ಕೆಲಸಗಳಲ್ಲಿ ಮಗ್ನರಾಗಿದ್ದರು.

ವೇಷಾಂತರದಿಂದ ತನ್ನನ್ನು ಮೋಸಗೊಳಿಸಲು ಬರುವ ಪತ್ತೇದಾರರು ಎಂದು ಬರಬಹುದು? ಯಾವ ರೀತಿ ಬರಬಹುದು? ಎಂದಿಗೆ ಅವರನ್ನು ಹಿಡಿದು ಅವಮಾನ ಪಡಿಸುವೆನು? ಎಂದು ಯೋಚಿಸಿ ಪತ್ತೇದಾರರನ್ನು ಅವಮಾನ ಪಡಿಸಿ ಅವರನ್ನು ಮನೆಯಲ್ಲಿ ಕೂರಿಸಲು ಹಾತೊರೆಯುತ್ತಿದ್ದನು.

ಆ ಒಂದು ವಿಚಾರವೇ ಪ್ರದೀಪನ ಮನದಲ್ಲಿ ನೆಲೆಯಾಗಿ ನಿಂತಪ್ರಯುಕ್ತ ಇತರ ಕಾರ್ಯಗಳಲ್ಲಿ ಉದಾಸೀನನಾದಂತೆ, ಊಟ, ಉಪಚಾರಗಳಲ್ಲಿಯೂ ಉದಾಸೀನನಾದನು. ರಾತ್ರಿ ಹನ್ನೆರಡು ಘಂಟೆಯವರೆವಿಗೂ ಎಚ್ಚರದಿಂದಿದ್ದು, ಅನಂತರ ಮಲಗಿ ಬೆಳಗಿನ ಝಾವ ನಾಲ್ಕು ಘಂಟೆಗೇ ಏಳುತ್ತಿದ್ದನು.

ಪತ್ತೇದಾರರು ವೇಷಾಂತರದಿಂದ ತನ್ನನ್ನು ಮೋಸಗೊಳಿಸಲು ಬಂದಿರುವರೆಂದು ನಿರ್ಧರಮಾಡಿಕೊಂಡು ಅವರನ್ನು ತಾನೇ ಪತ್ತೇಮಾಡಿ ಹಿಡಿಯಬೇಕೆಂಬ ಹಠದಿಂದ, ತಾನೂ ವೇಷವನ್ನು ಧರಿಸಿಕೊಂಡು ತನಗೆ ಅನುಮಾನ ಬಂದ ಸ್ಥಳಗಳಿಗೆಲ್ಲಾ ಹೋಗಿ ನೋಡಿದನು. ಯಾರಮೇಲಾದರೂ ಸಂದೇಹ ವುಂಟಾದರೆ, ಅವರಿಗರಿವಾಗದಂತೆ ಅವರ ಹಿಂದೆಯೇ ಹೊರಟು ಅವರಾರೆಂಬುದನ್ನು ಪರಿಶೀಲಿಸಿ ನೋಡಿ, ತನ್ನ ಅನುಮಾನವನ್ನು ದೂರ ಮಾಡಿಕೊಳ್ಳುತ್ತಿದ್ದನು.

ಕೆಲವು ದಿನಗಳು ಕಳೆಯಿತು.

ಪ್ರದೀಪನು ಎಂದಿನಂತೆ ತನ್ನ ಮಂಚದ ಮೇಲೆ ಮಲಗಿಕೊಂಡು ಅರ ನಿದ್ದೆಯಲ್ಲಿರುವನು.

ಮಧ್ಯರಾತ್ರಿಯ ಸಮಯ. ಜಗದೀಶಪುರವು ನಿಶ್ಶಬ್ದತೆಯಿಂದ ಕೂಡಿದೆ. ಊರಿನಲ್ಲೆಲ್ಲಿಯೂ ಜನಸಂಚಾರವಿಲ್ಲ. ಅಲ್ಲಲ್ಲಿ ಮಲಗಿದ್ದ ಊರು ನಾಯಿಗಳು ವಿಕಾರವಾಗಿ ಬೊಗಳುತ್ತಲಿವೆ.

ಅದರ ಮೇಲೆ ಅಮಾವಾಸ್ಯೆಯ ಕತ್ತಲು. ನಿಶಾದೇವಿಯು ತನ್ನ ಕಪ್ಪು ಸೆರಗನ್ನು ಪೃಥ್ವಿಯ ತುಂಬಾ ಹಾಸಿ, ಅದರ ಆಶ್ರಯದಲ್ಲಿ ಬದುಕುವ ಕಳ್ಳ ದರೋಡೆಕೋರರಿಗೆ ಸಂಪೂರ್ಣ ಆಶ್ರಯವಿತ್ತಿರುವಳು.

ಸದಾ ಪತ್ತೇದಾರರ ಯೋಚನೆಯಲ್ಲಿಯೇ ಮುಳುಗಿ, ದಡವನ್ನು ಕಾಣದೆ ಪರಿತಪಿಸಿ ಪರಿದಾಡುತ್ತಿದ್ದ ಪ್ರದೀಪನು ಅರನಿದ್ದೆಯಲ್ಲಿದ್ದ ಪ್ರಯುಕ್ತ ತನ್ನ ಮನೆಯಲ್ಲಿ ಯಾವುದೋ ಒಂದು ವಸ್ತುವು ಬಿದ್ದ ಶಬ್ದವನ್ನು ಕೇಳಿ ತಟ್ಟನೆ ಎದ್ದು ದೀಪವನ್ನು ಹಚ್ಚಿದನು.

ದೀಪ ಹಚ್ಚಿ ಆ ಬೆಳಕಿನಲ್ಲಿ ಕಂಡ ದೃಶ್ಯವಾದರೂ ಏನು ?

ಒಬ್ಬ ವ್ಯಕ್ತಿಯು ಪಿಸ್ತೂಲು ಹಿಡಿದುಕೊಂಡು ಅವನ ಎದುರಿಗೆ ನಿಂತಿರುವನು. ಶರೀರವೆಲ್ಲಾ ಕೆಂಪು ಬಟ್ಟೆಯಿಂದಲಂಕೃತವಾಗಿ, ಮುಖವು ಕಪ್ಪು ಬಟ್ಟೆಯಿಂದ ಕೂಡಿದೆ. ದೀಪದ ಬೆಳಕಿನಲ್ಲಿ ವ್ಯಕ್ತಿಯ ಎರಡು ಕಣ್ಣುಗಳು ಪಿಳಿಪಿಳಿ ನೋಡುತ್ತಿರುವುದು ಕಾಣುತ್ತಲಿದೆ.

ಆತನನ್ನು ನೋಡಿ ಪ್ರದೀಪನಿಗೆ ಭಯವಾಗುವ ಬದಲು ಆನಂದವಾಯಿತು.

ಈ ವ್ಯಕ್ತಿಯು ವೇಷಧಾರಿ ಪುರುಷೋತ್ತಮನೆಂದು ಅವನ ಮನಕ್ಕೆ ನಿರ್ಧರವಾಯಿತು. ಇನ್ನು ಪುರುಷೋತ್ತಮನು ಸೋತುಹೋದನೆಂದು ತಿಳಿದನಲ್ಲದೆ, ಇಬ್ಬರೂ ತಮ್ಮ ಕೆಲಸಕ್ಕೆ ಇನ್ನು ರಾಜೀನಾಮೆ ಕೊಡುವುದು ಖಂಡಿತವೆಂದುಕೊಂಡನು.

ಆನಂದವು ಅವನ ಹೃದಯದಿಂದ ಉಕ್ಕಿ ಹರಿಯಿತು. ಆನಂದದ ಆವೇಶದಲ್ಲಿ ಜೋರಾಗಿ ಚಪ್ಪಾಳೆ ತಟ್ಟಿ ನಕ್ಕನು.

ವ್ಯಕ್ತಿಗೆ ಆಶ್ಚರ್ಯವಾಗಿ ಯಾರಿಗಾದರೂ ಸನ್ನೆ ಮಾಡಿದನೋ

ಹೇಗೆಂದು ಯೋಚಿಸಿ, ಪಿಸ್ತೂಲನ್ನು ಪ್ರದೀಪನ ಮುಖಕ್ಕೇ ಹಿಡಿದು ಸುತ್ತ ಮುತ್ತಲೂ ನೋಡಲು ಯಾರೂ ಕಾಣಿಸಲಿಲ್ಲ.

ಪ್ರದೀಪನು ಗಾಂಭೀರ್ಯದಿಂದಲೇ—

"ಪತ್ತೇದಾರರೇ? ಹಾಗೇಕೆ ಸುತ್ತಮುತ್ತಲೂ ನೋಡುವಿರಿ? ಇರುವವನು ನಾನೊಬ್ಬನೇ. ಇಲ್ಲಿ ಬೇರೆಯಾರೂ ಅಡಗಿ ಕುಳಿತಿಲ್ಲ. ನೀವೇನೂ ಗಾಬರಿಯಾಗಬೇಡಿ. ವೇಷವನ್ನು ಕಳಚಿ ಬನ್ನಿ" ಎಂದನು.

ವ್ಯಕ್ತಿಯು ಪಿಸ್ತೂಲನ್ನು ಹಿಡಿದುಕೊಂಡೇ—

"ಯಾರಿಗೆ ಆ ರೀತಿ ಹೇಳುತ್ತಿರುವೆ?" ಎಂದು ಕೇಳಿದನು.

"ನಿಮಗೇ ಹೇಳುತ್ತಿರುವೆನು. ಇನ್ನು ಪರಿಹಾಸ್ಯವು ಸಾಕು. ಧ್ವನಿಯನ್ನು ಬದಲಾಯಿಸಿ ಮಾತನಾಡಿದರೆ ನಾನು ಗುರುತಿಸಲಾರೆನೆಂದು ತಿಳಿದಿರಾ? ನೀವು ಮಾತಿಗೆ ತಪ್ಪಿಯೂ ನಡೆದಿರುವಿರಿ. ನೀವಿನ್ನು ನಿಮ್ಮ ಕೆಲಸಕ್ಕೆ ರಾಜೀನಾಮೆ ಕೊಡುವುದೇ ಸರಿ."

ವ್ಯಕ್ತಿಯು ದಿಗ್ಮೂಢನಂತಾಗಿ—

"ನನ್ನನ್ನು ಯಾರೆಂದು ತಿಳಿದು ಈ ರೀತಿ ಮಾತನಾಡುತ್ತಿರುವೆ? ಮೊದಲು ಹೇಳು?" ಎಂದಿತು.

ಪ್ರದೀಪನು ವ್ಯಂಗ್ಯವಾಗಿ—

"ಅಯ್ಯೋ ಪಾಪ! ನನಗೇನೂ ತಿಳಿಯದು, ಅಲ್ಲವೇ? ನಾನು ಬಹುವಚನದಲ್ಲಿ ಮಾತನಾಡಿಸಿದರೆ ನೀವು ಏಕವಚನದಲ್ಲಿ ಮಾತನಾಡಿಸುವಿರಲ್ಲ. ನೀವು ಪಂದ್ಯದಲ್ಲಿ ಸೋತಂತಾಯಿತು. ಬನ್ನಿ ಕುಳಿತುಕೊಳ್ಳಿ. ನಿಮ್ಮ ರಾಮನಾಥನು ಆ ದಿನ ಏನೇನೋ ಹೇಳಿದನಲ್ಲ. ಆ ಪೌರುಷವು ಈಗ ಎಲ್ಲಿ ಹೋಯಿತು?" ಎಂದು ಕೇಳಿದನು.

ವ್ಯಕ್ತಿಗೆ ಕೋಪ ಬಂದಿತು.

"ರಾಮನಾಥನಾರು? ಪುರುಷೋತ್ತಮನಾರು? ಈ ನಿನ್ನ ಗಿಲೀಟು ಮಾತುಗಳೆಲ್ಲಾ ನಿನ್ನಲ್ಲಿಯೇ ಇರಲಿ. ನೀನು ಹೇಳುವುದೇ ಒಂದು ನಾಟಕೀಯವಾಗಿ ತೋರುತ್ತದೆ."

"ಹ್ಞಾದು? ನೀವು ಹೇಳುವುದು, ಈಗ ನಟನೆ ಮಾಡುತ್ತಿರುವುದು ನಾಟಕೀಯದಂತೆ ತೋರುತ್ತಿಲ್ಲವೇ?"

"ಅವಿವೇಕಿ! ಅಧಮಾ! ನಿನ್ನ ಮೇಲೆ ಸೇಡು ತೀರಿಸಿಕೊಳ್ಳಲು ನಾನು ಬಂದಿರುವೆನು. ನೀನು ಏನೇನೋ ಹೇಳುವೆಯಲ್ಲ. ಇನ್ನು ನಿನ್ನ ಈ ನಾಟಕೀಯವು ಸಾಕು. ಯಾವುದಾದರೊಂದು ಯುಕ್ತಿಯಲ್ಲಿ ಮಾತ ನಾಡುತ್ತಾ ವೇಳೆಯನ್ನು ಕಳೆದರೆ, ಅಷ್ಟರಲ್ಲಿ ನನ್ನವರು ಈತನನ್ನು ಹಿಡಿಯುವ ರೆಂದು ಭಾವಿಸಿರುವೆ. ಆ ರೀತಿ ಎಂದಿಗೂ ನಡೆಯದು. ನೀನು ಎಂತಹವ ನೆಂದು ನನಗೆ ತಿಳಿದಿದೆ. ನಿನ್ನ ಆಟವು ನನ್ನ ಬಳಿಯಲ್ಲಿ ನಡೆಯದೆಂದು ಭಾವಿಸು. ಪತ್ತೇದಾರನಂತೆ, ರಾಮನಾಥನಂತೆ. ಏಕವಚನವಂತೆ, ಬಹುವಚನ ವಂತೆ. ಮಾತನಾಡದೆ ಕೈಗಳನ್ನು ಮೇಲಕ್ಕೆ ಎತ್ತು."

—ಎಂದು ವ್ಯಕ್ತಿಯು ಘರ್ಜಿಸಿ ನುಡಿಯಿತು.

ಪ್ರದೀಪನು ಬೆರಗಾಗಿ ಹೋದನು. ಈ ವ್ಯಕ್ತಿಯು ಪುರುಷೋತ್ತಮನೇ ಎಂದು ನಿರ್ಧರಿಸಿಕೊಂಡನಲ್ಲದೆ, ಈತನು ತನ್ನನ್ನು ವಂಚಿಲು ಏನೇನೋ ಯುಕ್ತಿಯ ಆಟ ಹೂಡುತ್ತಿರುವನೆಂದುಕೊಂಡನು.

"ನಾನು ಕೈಗಳನ್ನು ಎತ್ತಿದನಂತರ ಏನು ಮಾಡುವಿರಿ?"

—ಎಂದು ಪ್ರದೀಪನು ಕೇಳಲು, ವ್ಯಕ್ತಿಯು—

"ನಿನ್ನ ಕೈಕಾಲುಗಳನ್ನು ಕಟ್ಟಿ, ನಿನ್ನ ಮನೆಯಲ್ಲಿರುವುದೆಲ್ಲವನ್ನೂ ದೋಚಿಕೊಂಡು ಹೋಗುವೆನು" ಎಂದಿತು.

"ಅಷ್ಟು ಮಾತ್ರವೇ?"

"ಹೌದು."

"ಅಲ್ಲಿಗೆ ನಿನ್ನ ಪ್ರತಿಜ್ಞೆಯು ನೆರವೇರುವುದೇ?"

"ಏನು ಪ್ರತಿಜ್ಞೆಯೋ, ಏನೋ. ನೀನು ಕೈಗಳನ್ನು ಮೇಲಕ್ಕೆತ್ತು ವೆಯೋ, ಇಲ್ಲವೋ? ಅಷ್ಟು ಹೇಳು?"

"ಎತ್ತದೇಹೋದರೆ ಏನು ಮಾಡುವಿರಿ?"

"ನಿನ್ನನ್ನು ಕೊಂದು, ಬಳಿಕ ನಿನ್ನ ಮನೆಯಲ್ಲಿದ್ದುದೆಲ್ಲವನ್ನೂ ದೋಚಿ ಕೊಂಡು ಹೋಗುವೆನು."

"ಈ ಬೆದರಿಕೆ ಬೇರೆ ಇರುವುದೇ?"

"ನೀನು ಕೈಗಳನ್ನು ಮೇಲಕ್ಕೆ ಎತ್ತುವೆಯೋ? ಇಲ್ಲವೋ? ಅಷ್ಟು ಹೇಳು."

"ಒಂದು ವೇಳೆ ಎತ್ತದೇಹೋದರೆ ಕೊಂದೇಬಿಡುವಿರಾ ?"

"ಖಂಡಿತವಾಗಿ."

"ಅಲ್ಲಿಗೆ ನಿಮ್ಮ ಪ್ರತಿಜ್ಞೆಯನ್ನು ಜೈಸಿದಂತಾಗುವುದೇ ? ಹೋ ! ಸರಿ, ಸರಿ ! ತಿಳಿಯಿತು. ನಾನು ಬದುಕಿದ್ದರೆ ಪತ್ತೇದಾರಿ ಕೆಲಸಕ್ಕೆ ರಾಜೀನಾಮೆ ಕೊಡಬೇಕಾಗುವುದಲ್ಲದೆ, ಮುಂದೆ ಅವಮಾನವಾಗುವುದೆಂದು ಬಾವಿಸಿ, ನನ್ನನ್ನು ಕೊಲ್ಲಬೇಕೆಂದಿರುವಿರಲ್ಲವೇ? ನಾನು ಊಹಿಸಿಕೊಂಡಂತೆ ನೀವು ಪತ್ತೇದಾರಿ ಕೆಲಸಕ್ಕೆ ಅರ್ಹರಲ್ಲ. ಸರಿ, ನಾನು ಕೈಗಳನ್ನು ಮೇಲಕ್ಕೆ ಎತ್ತು ವೆನು, ನಿಮ್ಮ ಇಷ್ಟಬಂದಂತೆ ಮಾಡಿಕೊಳ್ಳಿ. ಪ್ರಾಣವೊಂದುಳಿದರೆ ಸಾಕು. ಮುಂದೆ ಏನು ಮಾಡಬೇಕೆಂದು ನನಗೆ ತಿಳಿದಿದೆ."

ಪ್ರದೀಪನ ಮಾತಿಗೆ ವ್ಯಕ್ತಿಗೆ ನಗು ಬಂದಿತು. ಮುಖಕ್ಕೆ ಬಟ್ಟೆಯನ್ನು ಕಟ್ಟಿಕೊಂಡಿದ್ದ ಪ್ರಯುಕ್ತ, ಆತನು ನಗೆಯಾಡಿದುದು ಪ್ರದೀಪನಿಗೆ ಕಾಣಿಸ ಲಿಲ್ಲ,

ಪ್ರದೀಪನು ಪತ್ತೇದಾರರ ವಿಷಯದಲ್ಲಿ ವಿಶೇಷ ಎಚ್ಚರಿಕೆಯುಳ್ಳವನಾ ಗಿದ್ದರೂ, ತನ್ನ ಬಳಿಯಲ್ಲಿ ಪಿಸ್ತೂಲನ್ನು ಇಟ್ಟುಕೊಳ್ಳಲಿಲ್ಲ. ಪತ್ತೇದಾರರು ತನಗೆ ಯಾವುದಾದರೊಂದು ಬಗೆಯಲ್ಲಿ ಮೋಸಪಡಿಸುವರೆಂದು ತಿಳಿದಿದ್ದನಲ್ಲದೆ, ಈ ರೀತಿ ಮುಖಕ್ಕೆ ಕಪ್ಪುಬಟ್ಟೆಯನ್ನು ಕಟ್ಟಿಕೊಂಡು, ಪಿಸ್ತೂಲಿನೊಡನೆ ಮಧ್ಯರಾತ್ರಿಯಲ್ಲಿ ಬರುವರೆಂದು ತಿಳಿದಿರಲಿಲ್ಲ.

ರಾಮನಾಥನು ಹೊರಗಡೆ ಕಾವಲಾಗಿ, ಯಾರನ್ನೂ ಒಳಗೆ ಬಿಡದಂತೆ ನೋಡಿಕೊಳ್ಳುತ್ತಿರಬಹುದೆಂದುಕೊಂಡನು.

ಇವರು ಅಂದು ಮಾತನಾಡಿದ ಪ್ರಕಾರ ತನಗೆ ವೇಷಾಂತರದಿಂದ ಬಹಿ ರಂಗವಾಗಿ ಮೋಸಪಡಿಸಲು ಸಾಧ್ಯವಾಗದೆ, ಇನ್ನು ತಮ್ಮ ಮರ್ಯಾದೆಯು ಹೋಗುವುದೆಂಬ ಭಾವನೆಯಿಂದ ಈ ರೀತಿ ಮೋಸ ಪಡಿಸಲು ಬಂದಿರುವನು. ಈಗ ಮೌನವಾಗಿದ್ದು ಮುಂದೆ ಇವರ ಮರ್ಯಾದೆಯನ್ನು ಕಳೆಯದೆಹೋದರೆ ತಾನು ಪ್ರದೀಪನೇ ಅಲ್ಲವೆಂಬುದಾಗಿ ಶಪಥ ಮಾಡಿಕೊಂಡನು.

ಆ ಸಮಯದಲ್ಲಿ ಯಾವ ಬಗೆಯ ಪ್ರತೀಕಾರವನ್ನೂ ಮಾಡಲಾರದವ ನಾದನು.

ಈತನನ್ನು ಹಿಡಿಯಲು ಪ್ರಯತ್ನಿಸಿದರೆ ತನ್ನ ಪ್ರಾಣಕ್ಕೆ ಅಪಾಯವುಂಟಾದರೂ ಆಗಬಹುದೆಂದುಕೊಂಡು, ಆಗ ಯಾವ ಪ್ರಯತ್ನವನ್ನೂ ಮಾಡದೆ ಮೌನವಾಗಿ ತನ್ನ ಎರಡು ಕೈಗಳನ್ನು ಮೇಲಕ್ಕೆ ಎತ್ತಿದನು.

ವ್ಯಕ್ತಿಯು ತನ್ನ ಜೇಬಿನಿಂದ ಹಗ್ಗವನ್ನು ತೆಗೆದು, ಜೀರುಗುಣಿಕೆಹಾಕಿ, ಅಲ್ಲಿಂದಲೇ ಎಸೆದು ಪ್ರದೀಪನ ಕೈಗಳನ್ನು ಬಂಧಿಸಿದನು. ಪ್ರದೀಪನು ಬಂಧಿಯಾದನು.

ವ್ಯಕ್ತಿಯು ಕೂಡಲೇ ಪ್ರದೀಪನ ಹತ್ತಿರ ಬಂದು ಅವನನ್ನು ಮಂಚದ ಮೇಲೆ ತಳ್ಳಿ, ಆ ಮಂಚಕ್ಕೇ ಅವನ ಕೈಕಾಲುಗಳನ್ನು ಅದೇ ಹಗ್ಗದಿಂದ ಕಟ್ಟಿದನು.

ಪ್ರದೀಪನು ನಿರಾಯುಧನಾಗಿದ್ದ ಪ್ರಯುಕ್ತ ಏನೂ ಮಾಡಲಾರದವನಾದನು. ಪುರುಷೋತ್ತಮನೇ ತನ್ನನ್ನು ಈ ಅವಸ್ಥೆಗೆ ಗುರಿಮಾಡುತ್ತಿರುವನೆಂದುಕೊಂಡು, ಕಟಕಟನೆ ಹಲ್ಲುಗಳನ್ನು ಕಡಿಯತೊಡಗಿದನು.

ಅವನ ದರ್ಪವೆಲ್ಲಾ ಆ ಒಂದು ಕ್ಷಣದಲ್ಲಿಯೇ ನಾಶವಾಗಿ, ಇನ್ನು ಬೆಳಗಾಗುವವರೆವಿಗೆ ತಾನು ಹೀಗೆಯೇ ಬಂಧಿಯಾಗಿ ಬಿದ್ದಿರಬೇಕೆಂದುಕೊಂಡನು.

ಪ್ರದೀಪನನ್ನು ಮಂಚದ ಕಾಲುಗಳಿಗೆ ಕಟ್ಟಿದನಂತರ ವ್ಯಕ್ತಿಯು ಅವನ ಜೇಬಿನಿಂದ ಬೀಗದ ಕೈಗೊಂಚಲನ್ನು ತೆಗೆದುಕೊಂಡು, ಹಣದ ಪೆಟ್ಟಿಗೆಯ ಬಳಿಗೆ ಹೋಗಿ, ಅದರ ಬಾಗಿಲನ್ನು ತೆಗೆದು ಅದರಲ್ಲಿದ್ದ ಹಣವನ್ನೆಲ್ಲಾ ತನ್ನ ಜೇಬಿನಲ್ಲಿಟ್ಟುಕೊಂಡಿತು

ಪ್ರದೀಪನು ತನ್ನ ಕುತ್ತಿಗೆಯನ್ನು ಓರೆಮಾಡಿ ವ್ಯಕ್ತಿಯ ಕಾರ್ಯಚಟುವಟಿಕೆಯನ್ನು ನೋಡುತ್ತಲೇ ಇದ್ದನು.

ಹಣವನ್ನೆಲ್ಲಾ ತನ್ನ ಜೇಬಿಗೆ ಸೇರಿಸಿಕೊಂಡ ಬಳಿಕ ವ್ಯಕ್ತಿಯು ಪ್ರದೀಪನ ಉಡುಪುಗಳನ್ನೆಲ್ಲಾ ಚಿಂದಿಚಿಂದಿಯಾಗುವಂತೆ ಹರಿದುಹಾಕಿತು.

ಪ್ರದೀಪನ ವೈರಕ್ತವು ಬಿಸಿಯಾಯಿತು. ಆದರೇ, ಆ ವೇಳೆಯಲ್ಲಿ ಆತನು ಏನು ಮಾಡಲೂ ಅಸಮರ್ಥನಾಗಿದ್ದನು.

ಪ್ರದೀಪನು ಇನ್‌ಸ್ಪೆಕ್ಟರ್ ಪದವಿಗೆ ಬಂದಲಾಗಾಯ್ತು ಅಂತಹ ಘಟನೆಯು ನಡೆದಿರಲಿಲ್ಲ.

ವ್ಯಕ್ತಿಯು ಪ್ರದೀಪನ ಸಮೀಪಕ್ಕೆ ಬಂದು—

"ಪ್ರದೀಪಾ! ನನ್ನ ಪ್ರತಿಜ್ಞೆಯು ನೆರವೇರಿತು. ಬಹುದಿನಗಳಿಂದಲೂ ನಿನ್ನ ಮೇಲೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸುತ್ತಿದ್ದೆನು. ಈ ದಿನ ನನ್ನ ಆತ್ಮಕ್ಕೆ ಶಾಂತಿ ಲಭಿಸಿತು. ನಾನು ಯಾರೆಂದು ತಿಳಿಯುವ ಅಭಿಲಾಷೆಯು ನಿನಗಿರಬಹುದು. ನಾನು ಹೇಳಲಾರೆ. ನೀನು ಶತವಿಧದಲ್ಲಿ ಪ್ರಯತ್ನ ಪಟ್ಟರೂ ನಾನಾರೆಂಬುದನ್ನು ಕಂಡುಹಿಡಿಯಲಾರೆ. ನೀನು ಮಾತ್ರವೇ ಅಲ್ಲ! ನಿನ್ನಂತಹ ಹತ್ತು ಜನರು ಬಂದರೂ ನನ್ನನ್ನು ಹಿಡಿಯಲಾರರು. ನನ್ನ ಸಮಾನರಿಲ್ಲವೆಂಬ ಹೆಮ್ಮೆಯಿಂದ ಮೆರೆಯುತ್ತಿದ್ದೆ. ಆ ಹೆಮ್ಮೆಯೆಲ್ಲಾ ಈಗ ಏನಾಯಿತು? ನಿನ್ನನ್ನು ಕೊಂದು ನಿನ್ನ ರಕ್ತವನ್ನು ನನ್ನ ಕಣ್ಣಾರೆ ನೋಡಿ ಸಂತೋಷಪಡಬೇಕೆಂದಿದ್ದೆನು. ಆದರೇ, ಕೊಲ್ಲಲು ಮನಸ್ಸು ಬಾರದು. ಏನೋ ಒಂದು ಬಗೆಯ ಕರುಣದಿಂದ ಬಿಟ್ಟಿರುವೆನು. ನಿನ್ನನ್ನು ಈಗ ಕೊಲ್ಲ ಬೇಕೆಂದರೆ ನನಗೇನೂ ಹೆಚ್ಚಿನ ಶ್ರಮವಿಲ್ಲ. ಈಗ ನಿನ್ನನ್ನು ಕೊಲ್ಲಬೇಕೆಂದರೆ ನನಗೆ ಅಡ್ಡಿಪಡಿಸುವವರಾರಿರುವರು? ಕಳ್ಳತನ ಮಾಡಿದವನು ಪೋಲೀಸಿನವರ ಕಣ್ಣು ತಪ್ಪಿಸಿ, ಎಲ್ಲಿಯಾದರೂ ಕಾಲ ಕಳೆದುಕೊಂಡಿರಬಹುದು. ಕೊಲೆ ಮಾಡಿದವರು ಆ ರೀತಿ ಇರಲು ಸಾಧ್ಯವಿಲ್ಲ. ಆದ್ದರಿಂದ ನಿನ್ನನ್ನು ಹಾಗೇ ಬಿಟ್ಟಿರುವೆನು. ಇದು ನಿನ್ನ ಪುನರ್ಜನ್ಮವೆಂದು ತಿಳಿ. ಇನ್ನು ನಾನು ಹೋಗುವೆನು. ಇನ್ನು ಮೇಲಾದರೂ ಗರ್ವದಿಂದ ಮೆರೆಯದೆ, ನನ್ನ ಸಮಾ ನರಿಲ್ಲವೆಂದು ಅಹಂಕಾರ ಪಡಬೇಡ. ನೀನು ಬೆಳಗಾಗುವವರೆವಿಗೆ ಇದೇ ಅವಸ್ಥೆಯಲ್ಲಿರು. ಯಾರಾದರೂ ಬಂದು ಬಿಡಿಸುವರು." ಎಂದು ಹೇಳಿತು.

ಪ್ರದೀಪನ ಬಾಯಿಂದ ಮಾತುಗಳೇ ಹೊರಡಲಿಲ್ಲ.

ಈ ವ್ಯಕ್ತಿಯು ಪುರುಷೋತ್ತಮನೇ ಎಂದೂ, ಆ ಪ್ರಯುಕ್ತ ತನ್ನನ್ನು ಕೊಲ್ಲದೆ ಉಳಿಸಿರುವನೆಂದೂ, ತನ್ನ ಗುರುತು ಸಿಗಬಾರದೆಂದು ಕಂಠಧ್ವನಿ ಯನ್ನೂ ಸಹ ಬದಲಾಯಿಸಿ ಮಾತನಾಡುತ್ತಿರುವನೆಂದೂ ಯೋಚಿಸಿಕೊಂಡನು.

ಈ ವೇಳೆಯಲ್ಲಿ ಯಾವ ಮಾತನ್ನೂ ಆಡದೆ, ಇದರ ಸೇಡನ್ನು ಮುಂದೆ ತೀರಿಸಿಕೊಳ್ಳದೆ ಬಿಡಬಾರದೆಂದುಕೊಂಡನು.

ವ್ಯಕ್ತಿಯು ತನ್ನ ಕಾರ್ಯವನ್ನು ಮುಗಿಸಿಕೊಂಡು ಪ್ರದೀಪನೊಡನೆ ಹೇಳಬೇಕಾದ ವಿಷಯವನ್ನು ಹೇಳಿ, ಅಲ್ಲಿಂದ ಹೊರಟುಹೋಯಿತು.

ಪ್ರದೀಪನು ಬಂಧಿಯಾಗಿ ಒಬ್ಬನೇ ಉಳಿದನು. ಬಂಧನವನ್ನು ಬಿಡಿಸಿ ಕೊಳ್ಳಲು ಹಲವು ಬಗೆಯಲ್ಲಿ ಪ್ರಯತ್ನಪಟ್ಟರೂ ಸಾಧ್ಯವಾಗದೆ ಹೋಯಿತು.

'ವೇಷಾಂತರದಿಂದ ಬಹಿರಂಗವಾಗಿ ಮೋಸಪಡಿಸುವೆನೆಂದು ಹೇಳಿದ ಪುರುಷೋತ್ತಮನು ತನ್ನ ಪ್ರತಿಜ್ಞೆಯಂತೆ ನಡೆಯಲಿಲ್ಲ. ಹೇಳಿದ್ದೇ ಒಂದು ವಿಧವಾದರೆ, ಮಾಡಿರುವುದೇ ಒಂದು ವಿಧ. ರಾಮನಾಥನು ಆ ದಿನ ದರ್ಪದ ಮಾತುಗಳನ್ನಾಡಿದನು. ಅವರಿಬ್ಬರ ಪೌರುಷವೆಲ್ಲಾ ಕೇವಲ ಮಾತಿನಲ್ಲಿಯೇ ಎಂದು ಈಗ ತಿಳಿಯಿತು. ನಾಳೆಯ ದಿನವೇ ಕಾಂಚೀನಗರಕ್ಕೆ ಹೋಗಿ ಚಂದ್ರ ನಾಥನೊಡನೆ ಈಗ ನಡೆದ ವಿಷಯವನ್ನೆಲ್ಲಾ ಹೇಳಿ ಪತ್ತೇದಾರರಿಬ್ಬರಿಗೂ ಅವಮಾನ ಮಾಡುವೆನು. ಮೂರ್ಖನು ನನಗೆ ಅವಮಾನ ಮಾಡಿದನಲ್ಲದೆ, ಹಣವನ್ನೆಲ್ಲಾ ಅಪಹರಿಸಿ, ಬಟ್ಟೆಗಳನ್ನೆಲ್ಲಾ ತುಂಡು ತುಂಡು ಮಾಡಿ ಹೋಗಿ ರುವನು. ಅವನು ಪತ್ತೇದಾರನೇ? ಈ ರೀತಿ ಮಾಡುವನೆಂದು ಆ ದಿನ ತಿಳಿಸಿದ್ದನೇ? ಅವನು ಮಾಡಿರುವುದನ್ನು ನೋಡಿದರೆ ನನ್ನ ಮೇಲೆ ವಿಪರೀತ ದ್ವೇಷವಿರುವಂತೆ ತೋರುತ್ತದೆ. ಆ ದ್ವೇಷಾಸೂಯೆಯ ಫಲವಾಗಿ ಈ ರೀತಿ ಮಾಡಬೇಕೇ? ನಾಳೆಯ ದಿನ ಚಂದ್ರನಾಥನೊಡನೆ ಅವರಲ್ಲಿಗೆ ಹೋಗಿ ಪುನಃ ಅವರು ಪತ್ತೆದಾರಿ ಕೆಲಸವನ್ನು ಮಾಡದಂತೆ ಮಾಡುವೆನು. ಅವರಿಂದ ಏನಾದರೂ ಆಗಲಿ ಅವರನ್ನ ಅವಮಾನಪಡಿಸದೆ ಬಿಡಲಾರೆನು. ನಾನಿರ ಬೇಕು, ತಪ್ಪಿದರೆ ಅವರಿರಬೇಕು.'

ಎಂಬುದಾಗಿ ಯೋಚಿಸಿಕೊಂಡನು. ಬಂಧನದಿಂದ ಬಿಡಿಸಿಕೊಳ್ಳಲು ಹಲವು ಬಗೆಯಲ್ಲಿ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೈಕಾಲುಗಳನ್ನು ಆಡಿ ಸುವುದಕ್ಕೂ ಅವಕಾಶವಿರಲಿಲ್ಲ.

ಬೆಳಗಾಗುವವರೆವಿಗೆ ಇದೇ ಅವಸ್ಥೆಯಲ್ಲಿಯೇ ಸಾಯಬೇಕಾಗುವುದೆಂದು ಕೊಂಡನು.

ಜೋರಾಗಿ ಕೂಗಿ ಅಕ್ಕಪಕ್ಕದ ಮನೆಯವರಿಗೆ ಎಚ್ಚರಗೊಳಿಸುವುದಕ್ಕೂ ಮನಸ್ಸು ಬಾರದಂತಾಯಿತು.

೫

ಬೆಳಗಿನ ಎಂಟು ಘಂಟೆಯ ಸಮಯ. ಇನ್‌ಸ್ಪೆಕ್ಟರ್ ಚಂದ್ರನಾಥನು ಪೋಲೀಸ್‌ಠಾಣೆಗೆ ಹೊರಡುವ ವೇಳೆ.

ಠಾಣೆಗೆ ಹೊರಡಲು ಸಿದ್ಧನಾಗಿ ತನ್ನ ಮನೆಯಿಂದ ಹೊರಗೆ ಬರುತ್ತಲೇ ಎದುರಿಗೆ ಪ್ರದೀಪನು ಬಂದುದನ್ನು ಕಂಡನು.

ಏಕಾಏಕಿ ಪ್ರದೀಪನು ಬಂದುದನ್ನು ಕಂಡು ಆತನಿಗೆ ಆಶ್ಚರ್ಯವಾಯಿತು. ಪ್ರದೀಪನ ಆಗಿನ ಅವತಾರವನ್ನು ನೋಡಿ ಗಾಬರಿಯೂ ಆಯಿತು.

ಪ್ರದೀಪನ ಕಣ್ಣುಗಳು ಕೆಂಪಾಗಿ ರಕ್ತವರ್ಣವನ್ನು ತಾಳಿದ್ದುವು. ತಲೆಗೂದಲೆಲ್ಲಾ ಕೆದರಿಹೋಗಿತ್ತು. ಮೈಮೇಲಿದ್ದ ಉಡುಪುಗಳೂ ಮಾಸಿಹೋಗಿದ್ದುವು.

ಚಂದ್ರನಾಥನು ವಿನಯದಿಂದಲೇ—

"ಪ್ರದೀಪಾ ಇದೇನು ನಿನ್ನ ಅವಸ್ಥೆ ?" ಎಂದು ಕೇಳಿದನು.

ಪ್ರದೀಪನು ಸಿಟ್ಟಿನಿಂದಲೇ—

"ಮೂರ್ಖರ ಸಹವಾಸ ಮಾಡಿದರೆ ಆಗುವುದು ಹೀಗೆಯೇ ?" ಎಂದನು.

ಚಂದ್ರನಾಥನಿಗೆ ವಿಷಯವೇನೆಂದು ತಿಳಿಯಲಿಲ್ಲ. ಊಹಿಸಿಕೊಳ್ಳಲೂ ಅಸಮರ್ಥನಾದನು.

ಏನೋ ವಿಷಯವು ನಡೆದಿದೆಯೆಂದು ಭಾವಿಸಿ ಆತನನ್ನು ಒಳಗೆ ಕರೆದುಕೊಂಡು ಹೋಗಿ ಏನು ವಿಷಯವೆಂದು ಕೇಳಿದನು.

ಪ್ರದೀಪನು ಸಿಟ್ಟಿನಿಂದಲೇ—

"ಮಾತಿಗೆ ತಪ್ಪಿದವನನ್ನು ಮಾದಿಗನೆನ್ನಬೇಕು. ಹೇಳಿದಂತೆ ನಡೆಯದವನನ್ನು ನೀಚನೆನ್ನಬೇಕು. ತಿಳಿಯಿತೇ ?" ಎಂದನು.

"ನೀನು ಹೇಳುವುದೇ ಅರ್ಥವಾಗುತ್ತಿಲ್ಲ. ಅದೇನು ವಿಷಯ, ವಿವರವಾಗಿ ಹೇಳು. ಮಾತಿಗೆ ತಪ್ಪಿದವನಾರು ? ಆಡಿದಂತೆ ನಡೆಯದವನಾರು ? ನೀನು ಒಗಟಿನ ಮೇಲೆ ಹೇಳಿದರೆ ನನಗೆ ಅರ್ಥವಾಗದು."

ಪ್ರದೀಪನು ವ್ಯಂಗ್ಯವಾಗಿ—

"ಅದು ಹೇಗೆ ಅರ್ಥವಾಗುತ್ತದೆ, ಹೇಳು." ಎಂದನು.

"ನಿಜವಾಗಿಯೂ ನನಗೆ ತಿಳಿಯದು. ಏನು ವಿಷಯ ಹೇಳು ?"

"ಆ ದಿನ ನನ್ನ ಮತ್ತು ಪುರುಷೋತ್ತಮನ ವಿಷಯವಾಗಿ ಪಂಥ ಕಟ್ಟಿಕೊಂಡದ್ದು ನಿನಗೆ ಜ್ಞಾಪಕವಿದೆಯಲ್ಲವೇ ?"

"ಇದೆ. ಏಕೆ ? ಅದರಿಂದ ಏನಾಯಿತು."

"ಆಗುವುದೇನು ? ಮಹಾ ಅನರ್ಥವೇ ಸಂಭವಿಸಿತು."

"ಹೇಗೆ ?"

"ಇಂದು ಶುಕ್ರವಾರವಲ್ಲವೇ ?"

"ಹೌದು."

"ಬುಧವಾರದ ದಿನ ರಾತ್ರಿ ನನ್ನ ಮನೆಯಲ್ಲಿ ಮಲಗಿಕೊಂಡಿದ್ದಾಗ, ಸುಮಾರು ಮಧ್ಯರಾತ್ರಿಯ ವೇಳೆಯಲ್ಲಿ ಪುರುಷೋತ್ತಮನು ತನ್ನ ಶರೀರವನ್ನು ತುಂಬಾ ಕೆಂಪು ಬಟ್ಟೆಯಿಂದ ಮುಚ್ಚಿಕೊಂಡು, ತಲೆ ಮುಖವನ್ನು ಕಪ್ಪು ಬಟ್ಟೆಯಿಂದ ಮುಚ್ಚಿಕೊಂಡು ಪಿಸ್ತೂಲಿನೊಡನೆ ಹಾಜರಾದನು."

ಸೋಜಿಗನಾದ ಚಂದ್ರನಾಥನು—

"ಏನೂ........! ಪುರುಷೋತ್ತಮನೇ ?" ಎಂದು ಕೇಳಿದನು.

"ಹೌದು ! ಆತನೇ."

"ಆಗಲೇ ಕಂಡು ಹಿಡಿದೆಯಾ ?"

"ಅಯ್ಯೋ ಪಾಪ. ನಿನ್ನ ಪುರುಷೋತ್ತಮನು ದೇವತಾಮನುಷ್ಯನಲ್ಲವೇ? ಆ ವೇಷದಲ್ಲಿ ಮೋಸ ಪಡಿಸುವೆನೆಂದು ಹೇಳಿದ್ದನೇ ?"

"ಆ ವಿಷಯವಿರಲಿ. ಆಗ ಏನಾಯಿತೇಳು ?"

"ಆಗುವುದೇನು ? ಏನು ನಡೆಯಬೇಕಿತ್ತೋ ಅದೆಲ್ಲಾ ನಡೆದು ಹೋಯಿತು."

"ಆದುದಾದರೂ ಏನು ?"

ಮುಖವಾಡ ವ್ಯಕ್ತಿಯು ತನಗೆ ಗೋಚರಿಸಿದಲಾಗಾಯ್ತು, ಆತನು ಹಿಂದಿರುಗಿ ಹೋಗುವವರೆವಿಗೂ ನಡೆದ ಘಟನೆಯನ್ನೆಲ್ಲಾ ಪ್ರದೀಪನು ವಿವರ ವಾಗಿ ಹೇಳಲು ಚಂದ್ರನಾಥನು ರೋಮಾಂಚಿತನಾದನು.

ಪುರುಷೋತ್ತಮನು ಅಂತಹ ನೀಚ ಕಾರ್ಯವನ್ನು ಮಾಡಿರಬಹುದೇ? ಎಂಬ ಸಂಶಯಕ್ಕೊಳಗಾದನು.

ಪ್ರದೀಪನು ಹಲ್ಲುಗಳನ್ನು ಕಡಿಯುತ್ತಾ—

"ಚಂದ್ರನಾಥ! ನೋಡಿದೆಯಾ? ಪುರುಷೋತ್ತಮನ ಕೆಲಸ ? ಅಂತಹ ಹೀನ ಕಾರ್ಯ ಮಾಡುವುದಕ್ಕಿಂತಲೂ, ಪ್ರಾಣ ಬಿಡುವುದೇ ಲೇಸೆಂದು ತೋರುತ್ತದೆ" ಎಂದನು.

"ಆತನು ಪುರುಷೋತ್ತಮನೇ ಎಂದು ಹೇಗೆ ಹೇಳುವೆ ? ಬೇರೆಯವನು ಆಗಿರಬಾರದೇಕೆ ?"

"ನಿನಗೇನು ತಲೆ ಕೆಟ್ಟಿರುವುದೇ ? ಹೇಗೆ? ಅಥವಾ ಬೆಳಗಾಗುತ್ತಲೇ ಗಾಂಜಾ ತಪ್ಪಿದರೆ ಅಪೀಮನ್ನು ಸೇವಿಸಿರುವೆಯಾ? ನನಗೇನು ಅಷ್ಟು ಪರಿ ಜ್ಞಾನವಿಲ್ಲವೇ? ಆಡಿದಂತೆ ನಡೆಯಲು ಸಾಧ್ಯವಾಗದೆ ಹೋದಮೇಲೆ ನನ್ನಲ್ಲಿ ಕ್ಷಮಾಬಿಕ್ಷೆಯನ್ನು ಯಾಚಿಸಬೇಕಿತ್ತು. ನಾನು ಕ್ಷಮಿಸುತ್ತಿದ್ದೆನು. ತನ್ನ ಕೀರ್ತಿಗೆ ಕಳಂಕವೆಂದು ಆ ರೀತಿ ಮಾಡಬೇಕೇ? ಅದು ಯಾವ ನ್ಯಾಯ? ಆ ರೀತಿ ತಪ್ಪಿನಡೆಯುವನೆಂದು ಮೊದಲೇ ತಿಳಿದಿದ್ದರೆ, ಸದಾ ನನ್ನ ಜೊತೆಯಲ್ಲಿ ಬಾರು ಮಾಡಿದ ಪಿಸ್ತೂಲನ್ನು ಇಟ್ಟುಕೊಳ್ಳುತ್ತಿದ್ದೆನು. ಪುರುಷೋತ್ತಮನು ನನ್ನ ಮನೆಯೊಳಗೆ ಕಾಲಿಡುತ್ತಲೇ ಪಿಸ್ತೂಲಿನಿಂದ ಸುಟ್ಟುಬಿಡುತ್ತಿದ್ದೆನಲ್ಲದೆ, ಹಗಲೆಲ್ಲಾ ಭೂಟಾಟಿಕೆಯ ಪತ್ತೇದಾರನೆನಿಸಿಕೊಂಡಿದ್ದು, ರಾತ್ರಿಯಾಗುತ್ತಲೇ ದರೋಡೆ ಮಾಡುವ ಆಷಾಢಭೂತಿ ಪುರುಷೋತ್ತಮನು ನನ್ನ ಮನೆಗೆ ಕಳ್ಳತನ ಮಾಡಲು ಬಂದುದರಿಂದ, ಪಿಸ್ತೂಲಿನಿಂದ ಹೊಡೆದೆನೆಂದು ಹೇಳುತ್ತಿದ್ದೆನು. ಏನೋ ಅವನ ಅದೃಷ್ಟವು ಚೆನ್ನಾಗಿದ್ದುದರಿಂದ ನನ್ನ ಕೈಯಿಂದ ತಪ್ಪಿಸಿಕೊಂಡು ಬಂದಿರುವನು."

"ಹಾಗಾದರೆ! ಪುರುಷೋತ್ತಮನೇ ಬಂದಿದ್ದನೆಂದು ನಿರ್ಧರವಾಗಿ ಹೇಳುವೆಯಾ?"

"ಹೌದು! ನಿನಗೆ ಇನ್ನೂ ಅನುಮಾನವಿದೆ. ನಾನು ಹೇಳಿದರೆ ನಂಬಲಾರೆ. ತಲೆಯನ್ನು ಕಡಿದು ಮುಂದಿಟ್ಟರೂ ಕುರಿತಲೆಯೆಂದು ಹೇಳುವ ನಿನ್ನಂತಹ ಅವಿವೇಕಿಗಳಿಗೆ ನಾನೇನು ಹೇಳಲಿ? ಕಳ್ಳ, ದರೋಡೆಕೋರರಾದರೂ ಆಗಿದ್ದರೆ ನನ್ನನ್ನು ಜೀವ ಸಹಿತ ಬಿಟ್ಟುಬರುತ್ತಿದ್ದರೇ ? ಜೀವಸಹಿತ ಬಿಟ್ಟು ಬರಬೇಕೆಂಬ ಕನಿಕರವಾದರೂ ಅವರಿಗೇಕಿರುತ್ತದೆ? ಹಗ್ಗದಿಂದ ಕೈಕಾಲುಗಳನ್ನು ಕಟ್ಟಿ ಹೋಗಬೇಕೆಂಬ ನಿಯಮವೇನು? ಪ್ರದೀಪನನ್ನು ಉಳಿಸಿದರೆ ಒಂದು ದಿನ ತಪ್ಪಿದರೆ ಒಂದುದಿನ ನನ್ನನ್ನು ಹಿಡಿಯುವನೆಂಬ ಭಯವು ಅವರಿಗಿರುವುದಿಲ್ಲವೇ? ಯೋಚಿಸಿ ನೋಡು. ಅಷ್ಟು ಪರಿಜ್ಞಾನವು ನಿನಗಿದ್ದಿದ್ದರೆ ಈ ಪ್ರಶ್ನೆಗಳನ್ನೇಕೆ ಕೇಳುತ್ತಿದ್ದೆ ? ಪುರುಷೋತ್ತಮನಿಗೆ ನೀನೊಬ್ಬ ಸರಿಯಾದ ಹೊಗಳುಭಟ್ಟನಾಗಿರುವೆ."

ಪ್ರದೀಪನ ಪ್ರತಿಯೊಂದು ಮಾತೂ ಸಿಟ್ಟನ್ನುಂಟುಮಾಡುವುದಾಗಿದ್ದರೂ ಚಂದ್ರನಾಥನು ಸಿಟ್ಟುಮಾಡಿಕೊಳ್ಳಲಿಲ್ಲ. ಪುರುಷೋತ್ತಮನ ಸಹವಾಸದಲ್ಲಿದ್ದು ಮಾತುಮಾತಿಗೆ ಸಿಟ್ಟಾಗುವುದನ್ನು ವರ್ಜಿಸಿದ್ದನು.

"ಪ್ರದೀಪಾ! ನಿನ್ನ ಹಾಗೆ ಅಡಿಗಡಿಗೆ ನಾನು ಸಿಟ್ಟಾಗಲಾರೆ. ಏನು ಹೇಳಿದರೂ ಸರಿ, ನನಗೆ ಕೋಪವಿಲ್ಲ. ಆ ವಿಷಯವಿರಲಿ, ನೀನು ಆ ಬಂಧನದಿಂದ ಬಿಡುಗಡೆಯಾದುದು ಹೇಗೆ ? "

"ರಾತ್ರಿಯೆಲ್ಲಾ ಹಾಗೇ ನರಳಾಡುತ್ತಿದ್ದೆನು. ಬೆಳಿಗ್ಗೆ ಆರು ಘಂಟೆಯ ಸಮಯಕ್ಕೆ ನನ್ನ ಮನೆಗೆ ನಿತ್ಯವೂ ಹಾಲು ಕೊಡುವವನು ಬರಲು, ಅವನನ್ನು ಕೂಗಿ ನನ್ನ ಬಂಧನವನ್ನು ಬಿಡಿಸಿಕೊಂಡೆನು. ಆ ಹಾಲಿನವನು ಆಗಲೇ ಊರಿನಲ್ಲೆಲ್ಲಾ ಪುಕಾರು ಮಾಡಿಬಿಟ್ಟನು. ನನಗೆ ತಲೆಯೆತ್ತಿ ತಿರುಗುವುದೇ ಕಷ್ಟವಾಗಿದೆ. ನೆನ್ನೆಯ ದಿನವೆಲ್ಲಾ ಮನೆಯಿಂದ ಹೊರಗೆ ಬರದೆ, ರಾತ್ರಿಯಾಗುತ್ತಲೇ ಆ ಊರಿನಿಂದ ಈ ನಗರಕ್ಕೆ ಪ್ರಯಾಣ ಹೊರಟೆನು."

"ಸರಿ, ತಿಳಿಯಿತು. ಈಗ ಏನು ಮಾಡಬೇಕೆಂದಿರುವೆ ? "

"ಪುರುಷೋತ್ತಮನು ದಗಲ್ಬಾಜಿ ಕೆಲಸವನ್ನು ಮಾಡಿರುವುದರಿಂದ ಆಡಿದ ಮಾತಿನಂತೆ ನಡೆದುಕೊಳ್ಳಬೇಕು."

"ಯಾವ ಮಾತು ?"

"ತಮ್ಮ ಪತ್ತೇದಾರಿ ಕೆಲಸಕ್ಕೆ ರಾಜೀನಾಮೆಯನ್ನೀಯಬೇಕು. ಹೇಳಿದಂತೆ ನಡೆದುಕೊಂಡಿಲ್ಲ. ನನ್ನ ಮನೆಗೆ ನುಗ್ಗಿ, ನನ್ನ ಕೈಕಾಲುಗಳನ್ನು ಕಟ್ಟಿ, ಹಣವನ್ನೆಲ್ಲಾ ಅಪಹರಿಸಿ, ಬಟ್ಟೆಗಳನ್ನೆಲ್ಲಾ ತುಂಡುತುಂಡಾಗಿ ಹರಿದು ಹಾಕಲು ನಾನು ಹೇಳಿದ್ದೆನೇ? ಇದೆಂತಹ ನೀಚಕೃತ್ಯ? ಆತನು ಬಂದಾಗಲೇ ಪುರುಷೋತ್ತಮನು ಈ ವೇಷದಲ್ಲಿ ಬಂದಿರುವನೆಂದು ತಕ್ಷಣವೇ ಅರಿವಾಯಿತು. ನಾನು ಯಾವ ರೀತಿ ಒಡಂಬಡಿಸಿದರೂ ಒಡಂಬಡದೆ ಕೈಲಾಗದ ಹೇಡಿಯು ಮೈಯ್ಯೆಲ್ಲಾ ಪರಚಿಕೊಂಡನೆಂಬಂತೆ ಏನೇನೋ ಮಾಡಿರುವನು. ಮಾಡುವುದು ಅನಾಚಾರ, ಮನೆಯ ಮುಂದೆ ಬೃಂದಾವನವೆಂಬ ಗಾದೆಯಂತೆ ಈ ದರೋಡೆಕೋರನಿಗೆ ಬಿರುದುಬಾವಲಿಗಳೊಂದು ಕೇಡು. ವಿನಾಶಕಾಲೇ ವಿಪರೀತ ಬುದ್ಧಿ ಎಂಬ ಗಾದೆಯ ಮಾತಿನಂತೆ ಪುರುಷೋತ್ತಮನಿಗೆ ಇನ್ನು ವಿನಾಶ ಕಾಲವು ಬಂದಿದೆ. ಅದಕ್ಕಾಗಿ ವಿಪರೀತ ಕಾರ್ಯಗಳನ್ನು ಮಾಡುತ್ತಿರುವನು."

"ಪ್ರದೀಪಾ! ಪುರುಷೋತ್ತಮನು ಎಂದಿಗೂ ಮಾತು ತಪ್ಪಿ ನಡೆಯುವವನಲ್ಲ. ಮಾತು ಕೊಟ್ಟರೆ ಅದರಿಂದ ತನ್ನ ಪ್ರಾಣವೇ ಹೋಗುವಂತಹ ಸನ್ನಿವೇಶವೊದಗಿದರೂ ಆತನು ಮಾತಿಗೆ ತಪ್ಪುವುದಿಲ್ಲ. ರಾಮನಾಥನು ಮಹಾಕೋಪಿಯಾದರೂ ಪುರುಷೋತ್ತಮನ ಮಾತಿಗೆ ವಿರುದ್ಧವಾಗಿ ವರ್ತಿಸುವುದಿಲ್ಲ. ಆ ಕಳ್ಳನು ಯಾರೋ? ಏನೋ? ನೀನು ಪುರುಷೋತ್ತಮನೆಂದೇ ತಿಳಿದಿರುವೆ. ಮುಖವನ್ನು ನೋಡಲಿಲ್ಲ. ಕಂಠಧ್ವನಿಯನ್ನು ಬದಲಾಯಿಸಿ ಮಾತನಾಡಿದನೆಂದು ಹೇಳುವೆ. ನನಗೆ ನಂಬಿಕೆಯಿಲ್ಲ. ಹಗಲು, ರಾತ್ರಿ ನೀನು ಪುರುಷೋತ್ತಮನ ವಿಷಯವಾಗಿಯೇ ಕನವರಿಸುತ್ತಿರಬಹುದು. ನಿನ್ನ ಮೇಲಿನ ಸೇಡನ್ನು ತೀರಿಸಿಕೊಳ್ಳಲು ಯಾರೋ ಕಳ್ಳನು ಬಂದಿರಬಹುದು. ನೀನು ಆತನನ್ನು ಪುರುಷೋತ್ತಮನೆಂದೇ ತಿಳಿದು ಏನೇನೋ ಮಾತನಾಡಿರುವೆ. ನನಗೆ ಮಾತ್ರ ನಂಬಿಕೆಯಿಲ್ಲ."

ಮೊದಲೇ ಸಿಟ್ಟಿನಿಂದ ತಳಮಳಿಸುತ್ತಿದ್ದ ಪ್ರದೀಪನು ಚಂದ್ರನಾಥನನ್ನು ನುಂಗುವೋಪಾದಿಯಲ್ಲಿ ಕೆಟ್ಟ ಕಣ್ಣುಗಳಿಂದ ನೋಡಿ ಕಟಕಟನೆಂದು ಹಲ್ಲು ಕಡಿದನು.

ಸುಟ್ಟಗಾಯಕ್ಕೆ ಬಿಸಿ ಮರಳನ್ನು ಸುರಿದಂತೆ, ಮೊದಲೇ ಉಗ್ರ ಕೋಪದಿಂದ ಕುಳಿತಿದ್ದ ಪ್ರದೀಪನಿಗೆ, ಚಂದ್ರನಾಥನು ವಿನಯದಿಂದಲೇ ಮಾತನಾಡಿ ಇನ್ನೂ ಹೆಚ್ಚಿನ ಕೋಪವನ್ನುಂಟುಮಾಡಿದನು.

"ಚಂದ್ರನಾಥ! ಇನ್ನೂ ನೀನು ನನ್ನೊಡನೆ ಪರಿಹಾಸ್ಯ ಮಾಡುತ್ತಿರುವೆ. ಪರಿಹಾಸ್ಯಕ್ಕಿದು ಸಮಯವಲ್ಲ. ನಾನು ನೂರಾರು ಮೈಲಿಗಳ ದೂರದಿಂದ ಬಂದಿರುವುದು ನಿನ್ನೊಡನೆ ಹುಡುಗಾಟವಾಡುವುದಕ್ಕಲ್ಲ. ನೀನು ಇನ್ನೂ ಹುಚ್ಚಾಟದ ಗುಂಗಿನಲ್ಲಿಯೇ ಇರುವೆ."

"ಪುರುಷೋತ್ತಮನೇ ಬಂದಿದ್ದನೆಂದು ನಿರ್ಧರಪಡಿಸುವೆಯಾ?"

"ಇನ್ನೂ ನಿನಗೆ ಅನುಮಾನವೇ? ಖಂಡಿತವಾಗಿ, ನನ್ನಾಣೆಯಾಗಿ ಆತನೇ ಬಂದಿದ್ದು."

"ನನಗೆ ಖಂಡಿತವಾಗಿ ಅನುಮಾನವೇ. ನೀನು ಕೈಗಳನ್ನು ಮೇಲಕ್ಕೆ ಎತ್ತುವ ಬದಲು, ಅವನ ಮೇಲೆ ಹಾರಿ ಹಿಡಿಯಬಹುದಿತ್ತಲ್ಲ?"

"ಹಾಗೆ ಹಿಡಿಯಬೇಕೆಂದು ಯೋಚಿಸಿಕೊಂಡೆನು. ಆತನು ನಿರಾಯುಧನಾಗಿದ್ದರೆ ಹಾಗೇ ಮಾಡುತ್ತಿದ್ದೆನು. ಅವನ ಕೈಯ್ಯಲ್ಲಿ ಪಿಸ್ತೂಲಿದ್ದುದರಿಂದ ಮೇಲೆ ಬೀಳಲು ಭಯಪಟ್ಟೆನು. ಹಾಗೇನಾದರೂ ಹಿಡಿಯಲು ಪ್ರಯತ್ನಿಸಿದಾಗ ಪಿಸ್ತೂಲು ಹಾರಿಸಿದರೆ ನನ್ನ ಗತಿಯೇನು? ಆ ಪ್ರಯುಕ್ತ ತಟಸ್ಥನಾದೆನು."

"ರಾಮನಾಥನು ಬಂದಿರಲಿಲ್ಲವೇ?"

"ಆತನು ಹೊರಗೆ ಕಾವಲಾಗಿ ನಿಂತಿರಬಹುದು."

"ಏಕೆ?"

"ನನ್ನವರು ಯಾರಾದರೂ ಬಂದರೆ ಒಳಗೆ ಬಿಡದಂತೆ ತಡೆಯಬೇಕೆಂಬ ಉದ್ದೇಶದಿಂದ."

"ಈಗ ಪುರುಷೋತ್ತಮನಲ್ಲಿಗೆ ಹೋಗಬೇಕೇ?"

"ಹೌದು! ಆತನು ತನ್ನ ತಪ್ಪನ್ನು ಒಪ್ಪಿಕೊಳ್ಳುವಂತೆ ನೀನೇ ಹೇಳಬೇಕು."

"ಅದೇಕೆ ನಾನು ಹೇಳಬೇಕು?"

"ಆ ದಿನ ಮಾತುಕತೆ ನಡೆದಾಗ ನೀನಿರಲಿಲ್ಲವೇ?"

"ಇದ್ದ ಮಾತ್ರಕ್ಕೆ ರಾಜೀನಾಮೆ ಕೊಡಬೇಕೆಂದು ಹೇಳಲೇ? ಪುರುಷೋತ್ತಮನು ನಿನ್ನಲ್ಲಿಗೆ ಬಂದುದನ್ನು ನಾನು ನೋಡಿದ್ದೇನೇ? ಈಗಲೂ ಸಹ ಇನ್ನೂ ನನಗೆ ಅನುಮಾನವೆಂದೇ ಹೇಳುವೆನು. ನೀನು ಹೇಳಿದ ಮಾತ್ರಕ್ಕೆ ನಾನು ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಪುರುಷೋತ್ತಮನು ನೀನು ಹೇಳಿದಂತೆ ಒಪ್ಪಿಕೊಂಡರೆ ಆತನಿಂದ ರಾಜೀನಾಮೆ ಕೊಡಿಸಲು ಸಿದ್ಧನಿರುವೆನು. ಇಲ್ಲದೇ ಹೋದರೆ ಆ ಕಾರ್ಯ ನನ್ನಿಂದ ಸಾಧ್ಯವಿಲ್ಲ."

"ತಾವು ಮಾಡಿದ ತಪ್ಪನ್ನು ಯಾರಾದರೂ ಒಪ್ಪಿಕೊಳ್ಳುವರೇ? ಪುರುಷೋತ್ತಮನು ಒಪ್ಪಿಕೊಳ್ಳದೆ ಇರಬಹುದು."

"ಪುರುಷೋತ್ತಮನು ಆ ರೀತಿ ಸುಳ್ಳು ಹೇಳಲಾರನೆಂದು ನನಗೆ ನಂಬಿಕೆಯಿದೆ. ನೀನೆಣಿಸಿದಂತೆ ಆತನು ಅಷ್ಟು ಅಲ್ಪನೆಂದು ಭಾವಿಸಬೇಡ. ನೀನೊಂದು ವೇಳೆ ಸುಳ್ಳು ಹೇಳಬಹುದು. ಆತನು ಹೇಳಲಾರನು."

"ನಿನಗೆ ಅಷ್ಟು ನಂಬಿಕೆಯಿರುವುದೇ?"

"ಖಂಡಿತವಾಗಿ."

"ಹಾಗಿದ್ದ ಮೇಲೆ ಆತನು ರಾಜೀನಾಮೆ ಕೊಡುವುದು ಖಂಡಿತವೆಂದು ಭಾವಿಸು."

"ಹಾಗೇ ಆಗಲಿ. ಆತನು ಒಪ್ಪಿಕೊಂಡರೆ ರಾಜೀನಾಮೆ ಕೊಡಿಸುವ ಭಾರವು ನನಗಿರಲಿ."

"ಆದರೆ ರಾಜೀನಾಮೆಯ ಅರ್ಥವು ನಿನಗೆ ತಿಳಿದಿರುವುದೇ?"

"ಅದರ ಅರ್ಥವು ನನಗೆ ಚೆನ್ನಾಗಿ ತಿಳಿದಿದೆ."

"ಹಾಗಿದ್ದ ಮೇಲೆ ನಡೆ. ಆತನಲ್ಲಿಗೆ ಹೋಗೋಣ. ಇನ್ನು ನನ್ನ ಕಾರ್ಯವಾದಂತೆಯೇ."

"ಪ್ರದೀಪಾ! ದುಡುಕಬೇಡ. ಇನ್ನೂ ಒಂದು ಸಾರಿ ದೀರ್ಘವಾಗಿ ಪರ್ಯಾಲೋಚಿಸು. ಪುರುಷೋತ್ತಮನು ತಾನು ಬಂದಿಲ್ಲವೆಂದು ಆಧಾರ ಸಹಿತವಾಗಿ ಸಾಕ್ಷಿಪುರಾವೆಗಳನ್ನಿತ್ತರೆ ನೀನು ಅವಮಾನಿತನಾಗುವೆ. ಆದ್ದರಿಂದ ಯೋಚಿಸಿ ಕಾರ್ಯವನ್ನು ಮುಂದುವರಿಸುವುದು ಉತ್ತಮವೆಂದು ಹೇಳುವೆನು."

"ಚಂದ್ರನಾಥ! ನನ್ನೊಡನೆ ಅಡಗೂಲಜ್ಜಿ ಪುರಾಣವನ್ನು ಹೇಳಬೇಡ. ನಾನು ಯೋಚಿಸಿಕೊಂಡೇ ಬಂದಿರುವೆನು. ನಿನ್ನ ಹಾಗೆ ನಾನೇನೂ ಅವಿವೇಕಿಯಲ್ಲ."

"ನಿನ್ನ ಪಾಲಿಗೆ ಎಲ್ಲರೂ ಅವಿವೇಕಿಗಳೇ. ನೀನೊಬ್ಬನೇ ಅದರಲ್ಲಿ ಮಹಾ ಬುದ್ಧಿವಂತ. ಎಲ್ಲರ ತಲೆಯಲ್ಲಿ ಗೊಬ್ಬರವೇ ಇರಬಹುದು. ನಿನ್ನ ತಲೆಯಲ್ಲಿ ಮಾತ್ರ ಮೆದುಳಿದೆ. ಆನೆಯು ಬದುಕಿದ್ದಾಗ ಎಷ್ಟು ಬೆಲೆಯಾಗುವುದೋ, ಸತ್ತರೂ ಅಷ್ಟೇ ಬೆಲೆಯಾಗುತ್ತದೆ. ಹಾಗೆ ನೀನು ಬದುಕಿದ್ದರೂ ಸರಿ, ಸತ್ತರೂ ಸರಿ, ಬದುಕಿರುವಾಗ ನಿನ್ನ ಯೋಗ್ಯತೆಗೆ ಬೆಲೆಯಿರುತ್ತದೆ. ಸತ್ತನಂತರ ನಿನ್ನ ಮೆದುಳಿಗೂ ಬೆಲೆ ದೊರೆಯುತ್ತದೆ."

"ಚಂದ್ರನಾಥ! ನೀನು ಕೇವಲ ಕೀಟಲೆಯ ಮಾತುಗಳಲ್ಲಿಯೇ ಕಾಲ ಕಳೆಯುತ್ತಿರುವೆ. ಪುರುಷೋತ್ತಮನು ಒಪ್ಪಿಕೊಂಡನಂತರ ನಿನ್ನ ಅವಸ್ಥೆಯೇನಾಗುವುದೆಂದು ಈಗ ಹೇಳಿ ಫಲವಿಲ್ಲ. ನಡೆ ಹೋಗೋಣ."

"ಮೊದಲು ಕಾಫಿ ಕುಡಿ. ಬಳಿಕ ಹೋಗೋಣ."

"ಕಾಫಿಯೂ ಬೇಡ, ಗೀಫಿಯೂ ಬೇಡ. ನಡೆ."

"ಆತುರಗಾರನಿಗೆ ಬುದ್ಧಿ ಮಟ್ಟ ಎಂಬ ಗಾದೆಯು ಸುಳ್ಳಲ್ಲ. ನಿನ್ನ ಇಷ್ಟಕ್ಕೆ ನಾನೇಕೆ ವಿರೋಧವಾಗಿ ವರ್ತಿಸಲಿ? ನಡೆ ಹೋಗೋಣ."

ಪ್ರದೀಪನು ಪ್ರತ್ಯುತ್ತರವೀಯದೆ ಹೊರಡಲು ತಯಾರಾದನು.

ಇನ್ಸ್ಪೆಕ್ಟರಿಬ್ಬರೂ ಪುರುಷೋತ್ತಮನ ಮನೆಗೆ ಹೊರಟರು. ಮಾರ್ಗದಲ್ಲಿ ಅವರಿಬ್ಬರಲ್ಲಿ ಯಾವ ಬಗೆಯ ಮಾತುಕತೆಗಳೇನೂ ನಡೆಯಲಿಲ್ಲ.

೬

ಪುರುಷೋತ್ತಮನು ರಾಮನಾಥನೊಡನೆ ಪ್ರದೀಪನ ವಿಷಯವಾಗಿ, ಮುಂದೆ ಯಾವ ರೀತಿ ವರ್ತಿಸಬೇಕೆಂಬುದರ ಬಗ್ಗೆ ಮಾತನಾಡುತ್ತಿರಲು ಪ್ರದೀಪನು ಇನ್ಸ್‌ಪೆಕ್ಟರೊಡನೆ ಆಗಮಿಸಿದನು.

ಪುರುಷೋತ್ತಮನು ನಸುನಗುತ್ತಾ ಇಬ್ಬರನ್ನೂ ಸ್ವಾಗತಿಸಿ ವಿಷಯವೇನೆಂದು ಕೇಳಿದನು.

ಪ್ರದೀಪನು ಕೋಪದಿಂದಲೇ—

"ಪತ್ತೇದಾರರೇ! ವಿಷಯವೇನೆಂದು ಏನೂ ಅರಿಯದವರಂತೆ ಕೇಳಬೇಡಿ. ನಮ್ಮನ್ನು ನೋಡಿ ನೀವು ನಸುನಕ್ಕಾಗಲೇ ತಿಳಿಯಿತು." ಎಂದು ಹೇಳಿದನು.

"ಏನು ತಿಳಿಯಿತು?"

"ಅಯ್ಯೋ! ಪಾಪ, ನಿಮಗೇನೂ ಗೊತ್ತಿಲ್ಲ. ಅಲ್ಲವೇ? ಸುಮ್ಮನೆ ಏಕೆ ಪರಿಹಾಸ್ಯಮಾಡುವಿರಿ. ಪಂಥದಲ್ಲಿ ಸೋತೆನೆಂದು ಒಪ್ಪಿಕೊಳ್ಳಿ. ಹೆಚ್ಚು ಮಾತೇಕೆ?"

"ಏಕೆ ಒಪ್ಪಿಕೊಳ್ಳಲಿ?"

"ಏಕೆಯೇ? ಮಾಡಿರುವ ಕೆಲಸಕ್ಕೆ."

"ಏನು ಮಾಡಿರುವೆನು?"

"ಏನು ಮಾಡಿರುವೆನೆಂದು ನಿಮಗೇ ತಿಳಿದಿದೆ."

"ನನಗೇನೂ ತಿಳಿಯದು. ನೀವು ವಿವರವಾಗಿ ಹೇಳಿದರೆ ಅರ್ಥವಾಗುತ್ತದೆ. ಅದೇನು ಹೇಳಿ."

"ಅಂಗೈಯಲ್ಲಿರುವ ಗಾಯವನ್ನು ನೋಡಲು ಕನ್ನಡಿಯು ಬೇಕೆಂಬ ಗಾದೆಯಂತಾಗಿದೆ, ನಿಮ್ಮ ಮಾತು. ಪ್ರತಿಯೊಂದು ವಿಷಯವನ್ನು ತಿಳಿದೂ, ತಿಳಿದು ಏನೂ ತಿಳಿಯದವರಂತೆ ಮಾತನಾಡಬೇಡಿ. ನಾನಾಗಲೇ ಚಂದ್ರ ನಾಥನ ಬಳಿಯಲ್ಲಿ ಎಲ್ಲಾ ವಿಷಯವನ್ನೂ ಹೇಳಿರುವೆನು. ಕೇಳಿ ತಿಳಿದು ಕೊಳ್ಳಿ. ಇತರರ ಬಳಿಯಲ್ಲಿ ನಿಮ್ಮ ಆಟವು ನಡೆದಂತೆ ನನ್ನ ಬಳಿಯಲ್ಲಿ ನಡೆ ಯದು. ತಿಳಿದಿರಿ. ಇತರ ಇನ್ಸ್ಪೆಕ್ಟರ್‌ಗಳ ಜೊತೆಗೆ ನನ್ನನ್ನು ಸೇರಿಸಬೇಡಿ. ನನ್ನನ್ನು ಈ ಸೋಮಾರಿ ಚಂದ್ರನಾಥನೆಂದು ತಿಳಿಯಬೇಡಿ."

ರಾಮನಾಥನು ಮೌನವಾಗಿಯೇ ಅವರಿಬ್ಬರ ಸಂಭಾಷಣೆಗಳನ್ನು ಕೇಳು ತ್ತಿದ್ದನು. ಪ್ರದೀಪನ ಮಾತುಗಳನ್ನು ಕೇಳಿ ಅವನಿಗೆ ಸಿಟ್ಟು ಬಂದಿತಾದರೂ, ಪುರುಷೋತ್ತಮನು ಎದುರಿನಲ್ಲಿರುವ ಪ್ರಯುಕ್ತ ಏನೂ ಮಾಡುವಹಾಗಿಲ್ಲ.

ಪುರುಷೋತ್ತಮನು ಹುಸಿನಕ್ಕು ಚಂದ್ರನಾಥನ ಕಡೆ ತಿರುಗಿ ಏನು ವಿಷಯವೆಂದು ಪ್ರಶ್ನಿಸಿದನು.

ಪುರುಷೋತ್ತಮನು ಹುಸಿನಕ್ಕದ್ದನ್ನು ನೋಡಿ ಚಂದ್ರನಾಥನಿಗೂ ಸಹ ಆತನ ವಿಷಯದಲ್ಲಿ ಸಂದೇಹವುಂಟಾಯಿತು. ಪ್ರದೀಪನ ಭಾವನೆಯಂತೆ ಇವರಿಬ್ಬರೇ ಆ ಕಾರ್ಯವನ್ನೆಸಗಿರಬಹುದೆಂದುಕೊಂಡನು.

ಪ್ರದೀಪನು ತನ್ನಲ್ಲಿಗೆ ಬಂದಲಾಗಾಯ್ತು, ಪುರುಷೋತ್ತಮನಲ್ಲಿಗೆ ಬರು ವವರೆವಿಗೆ, ಏನು ನಡೆಯಿತೆಂಬುದನ್ನು ಚಂದ್ರನಾಥನು ವಿವರವಾಗಿ ಹೇಳಲು, ಪತ್ತೇದಾರರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ನಕ್ಕರು.

ಚಂದ್ರನಾಥನು ಸೋಜಿಗಗೊಂಡನು.

ಪುರುಷೋತ್ತಮನು ಪ್ರದೀಪನ ಕಡೆ ಮುಖ ಮಾಡಿ—

"ಕಳ್ಳನು ಅಷ್ಟು ಕೆಲಸಗಳನ್ನು ಮಾಡಿದನೇ ?" ಎಂದು ಕೇಳಿದನು.

ಪ್ರದೀಪನು ವ್ಯಂಗ್ಯವಾಗಿ—

"ಅಯ್ಯೋ ಪಾಪ ! ನಿಮಗೇನೂ ತಿಳಿಯದು. ನೀವೇ ಆ ದೊಡ್ಡ ಕಳ್ಳರಾಗಿರುವಾಗ, ನಾನು ಇನ್ನು ಹೇಳುವುದಾದರೂ ಏನಿದೆ ? ನನ್ನನ್ನು ಈ ಚಂದ್ರನಾಥನೆಂದು ತಿಳಿಯಬೇಡಿ. ಆಶ್ಚರ್ಯವನ್ನು ಸೂಚಿಸಿದರೆ ಮರುಳಾಗು ವವನು ನಾನಲ್ಲ" ಎಂದು ಹೇಳಿದನು.

"ವೀರಾಧಿವೀರ ಮತ್ತು ಶೂರಾಧಿಶೂರರೆಂದು ನಿಮಗೆ ಬಿರುದಿರುವಾಗ ನೀವೆಲ್ಲಿಯಾದರೂ ಮರುಳಾಗುವುದುಂಟೇ? ನಿಮ್ಮ ಹೆಸರು ಕೇಳಿದ ಮಾತ್ರಕ್ಕೆ ಕಳ್ಳ, ಕೊಲೆಗಾರರು ಗಡಗಡನೆ ನಡುಗುವರೆಂದಬಳಿಕ, ನೀವು ಎಲ್ಲಿ ಯಾದರೂ ಭಯ ಪಡುವುದುಂಟೇ? ನರಿಯನ್ನು ನೋಡಿದ ಮಾತ್ರಕ್ಕೆ ಸಿಂಹವು ಹೆದರುವುದೇ? ಸರಿ, ಸರಿ! ನೀವು ಶೂರರೇ ಹೌದು. ನಾನೂ ಒಪ್ಪಿಕೊಳ್ಳುವೆನು."

"ಕಳ್ಳ, ಕೊಲೆಗಾರರು ಭಯದಿಂದ ತತ್ತರಿಸಿ ನಡುಗುವುದು ಮಾತ್ರವಲ್ಲ. ನೀವಿಬ್ಬರೂ ಸಹ ಭೀತಿಯಿಂದ ತಲ್ಲಣಿಸುವ ಕಾಲ ಬಂದಿದೆ. ತಿಳಿಯಿತೇ?"

ಹೆಮ್ಮೆಯಿಂದಲೇ ಪ್ರದೀಪನು ಮೇಲಿನಂತೆ ನುಡಿದನು.

ಅವನ ಮಾತುಗಳನ್ನು ಕೇಳುತ್ತಲೇ ರಾಮನಾಥನಿಗೆ ತಡೆಯಲಾರದಷ್ಟು ಸಿಟ್ಟು ಬಂದಿತು.

ಸಿಟ್ಟಿನಿಂದ ಪ್ರದೀಪನನ್ನು ನೋಡುತ್ತಾ—

"ಅವಿವೇಕಿ! ಯಾರೊಡನೆ ಮಾತನಾಡುತ್ತಿರುವೆ? ಎಚ್ಚರಿಕೆಯಿಂದ ಮಾತನಾಡು. ತಲೆ ಬಲಿಯಿತೆಂದು ಕಲ್ಲಿಗೆ ಹಾಯಬೇಡ. ನಿನ್ನನ್ನು ನೋಡಿ ನಾವು ಭೀತಿಗೊಳ್ಳಬೇಕೇ? ನನಗೆ ಮಾತ್ರ ಸಿಟ್ಟಿರುವುದಲ್ಲದೆ ಬೇರೆ ಯಾರಿಗೂ ಇಲ್ಲವೆಂದು ತಿಳಿದೆಯಾ? ಪುರುಷೋತ್ತಮನು ಈ ವೇಳೆಯಲ್ಲಿ ಇಲ್ಲದೇಹೋಗಿದ್ದರೆ, ನಿನ್ನ ಅವಸ್ಥೆಯೇನಾಗುತ್ತಿತ್ತೆಂದು ಅನುಭವಿಸಿದ ಮೇಲೆ ತಿಳಿಯುತ್ತಿತ್ತು. ಶಾಂತರೀತಿಯಿಂದ ಮಾತುಗಳನ್ನು ಕೇಳುತ್ತಿರುವೆವೆಂದು ಬಾಯಿಗೆ ಬಂದಂತೆ ಮಾತನಾಡುವೆಯಾ? ನಿನಗೆ ಧೈರ್ಯವಿದ್ದರೆ ನಾನೊಬ್ಬನೇ ಇರುವ ವೇಳೆಯಲ್ಲಿ ಈ ರೀತಿ ಮಾತನಾಡು. ನಿನ್ನ ಪರಿಣಾಮವೇನಾಗುವುದೆಂದು ಆಗ ಅನುಭವಿಸಿ ನೋಡುವೆ. ಸಾಮಾನ್ಯ ಒಬ್ಬ ಕಳ್ಳನನ್ನು ಹಿಡಿಯಲು ಅಸಮರ್ಥನಾದ ನೀನು, ನಮ್ಮ ಬಳಿಯಲ್ಲಿ ನಿನ್ನ ಪೌರುಷವನ್ನು ಹೇಳಿಕೊಳ್ಳುವೆಯಾ? ಕಳ್ಳ, ಕೊಲೆಗಾರರ ಬಳಿಯಲ್ಲಿ ನೀನು ಸಿಟ್ಟು ಮಾಡಿದರೆ ನಡೆಯುತ್ತದೆ. ಅದೂ ಅವರು ಬಂಧಿಯಾಗಿರುವ ವೇಳೆಯಲ್ಲಿ ಮಾತ್ರ. ನೀನೊಬ್ಬ ಶುದ್ಧ ಅವಿವೇಕಿಯೇ ಸರಿ. ಅಡಿಗಡಿಗೆ ಚಂದ್ರನಾಥನಿಗೆ ಅವಹೇಳನ ಮಾಡುವೆಯಲ್ಲ. ನಿನ್ನ ಯೋಗ್ಯತೆಯನ್ನೂ ಮೀರಿ ಮಾತನಾಡುತ್ತಿರುವೆಯಲ್ಲ. ಮಾತ

ನಾಡುವಾಗ ಹಿಂದುಮುಂದಿನ ಆಲೋಚನೆಯಿರಲಿ. ಎಚ್ಚರಿಕೆ!" ಎಂದು ನುಡಿದನು.

ರಾಮನಾಥನ ಮಾತಿಗೆ ಪ್ರದೀಪನು ಬೆರಗಾಗಿಹೋದನು. ಚಂದ್ರ ನಾಥನೂ ಸಹ ಭೀತಿಯಿಂದ ತಲ್ಲಣಿಸಿದನು.

ಪ್ರದೀಪನು ಪುನಃ ಅಹಂಕಾರದಿಂದಲೇನಾದರೂ ಮಾತನಾಡಿದರೆ, ರಾಮನಾಥನಿಂದ ಏಟು ತಿನ್ನುವನೆಂದು ಚಂದ್ರನಾಥನ ಮನಕ್ಕೆ ಅರಿವಾಯಿತು.

ಅವನ ಮನೋಭಿಪ್ರಾಯದಂತೆ ರಾಮನಾಥನು ತಯಾರಾಗಿಯೇ ಇದ್ದನು. ಆದರೆ ಪ್ರದೀಪನು ತುಟಿ ಎರಡು ಮಾಡಲಿಲ್ಲ.

ಪ್ರದೀಪನು ಒಂದುವೇಳೆ ಮಾತನಾಡಿದ್ದರೂ, ಆತನ ಮೈಮೇಲೆ ಒಂದು ಏಟೂ ಬೀಳದಂತೆ ನೋಡಿಕೊಳ್ಳಲು ಪುರುಷೋತ್ತಮನು ತಯಾರಿದ್ದನು.

ಪ್ರದೀಪನು ಪುರುಷೋತ್ತಮನ ಕಡೆ ತಿರುಗಿ—

"ತಪ್ಪು ಮಾಡಿ ಪುನಃ ಏನೂ ಅರಿಯದವರಂತೆ ನಟಿಸುವುದು ನಿಮಗೆ ನ್ಯಾಯವಲ್ಲ" ಎಂದನು.

ಪುರುಷೋತ್ತಮನು ಮಾತನಾಡುವ ಮೊದಲೇ ರಾಮನಾಥನು ಸಿಟ್ಟಿನಿಂದಲೇ—

"ನಾವೇನೂ ತಪ್ಪು ಮಾಡಿಲ್ಲ. ನೀನೇ ತಪ್ಪು ಮಾಡಿರುವೆ. ಮಾಡುತ್ತಲೂ ಇರುವೆ. ನಿನ್ನ ದರ್ಪವು ಇಲ್ಲಿ ನಡೆಯದು" ಎಂದನು.

ಪುರುಷೋತ್ತಮನು ರಾಮನಾಥನಿಗೆ—

"ರಾಮನಾಥ! ಮಾತನಾಡದೆ ಮೌನವಾಗಿ ಕುಳಿತುಕೊ. ಏಕೆ ಆತುರ ಪಡುವೆ? ಇನ್ನು ಕೊಂಚ ಹೊತ್ತಿನೊಳಗೆ ಕೊಳ್ಳೆ ಹೋಗುವುದಾದರೂ ಏನಿದೆ? ನಾನು ಮಾತನಾಡುವೆನು. ನೀನು ಮಧ್ಯೆ ಮಧ್ಯೆ ಸಿಟ್ಟಾಗಬೇಡ" ಎಂದನು.

ರಾಮನಾಥನ ಕೆಂಪಾದ ಕಣ್ಣುಗಳು ಪುರುಷೋತ್ತಮನ ಮಾತುಗಳನ್ನು ಕೇಳುತ್ತಲೇ ಮೊದಲಿನ ಸ್ಥಿತಿಯನ್ನು ತಾಳಿದುವು. ಕಾವೇರಿದ್ದ ಮೈ ರಕ್ತವು ತಣ್ಣಗಾಯಿತು.

ಮೇರೆದಪ್ಪಿ ಬೆಟ್ಟದಾಕಾರವಾಗಿ ಎದ್ದಿದ್ದ ಅಲೆಯು, ಬಂಡೆಗೆ ಅಪ್ಪಳಿಸಿ ಶಾಂತಿಯಾದಂತಾಯಿತು.

ಬಳಿಕ ಪುರುಷೋತ್ತಮನು—

"ನಾನೇ ಬಂದಿದ್ದೆನೆಂದು ನಿಮ್ಮ ಭಾವನೆಯೋ ?" ಎಂದು ಪ್ರದೀಪನನ್ನು ಕೇಳಿದನು.

"ಹೌದು ! ಅದರಲ್ಲಿ ಸಂದೇಹಪಡಬೇಕಾದ ಕಾರಣವೇ ಇಲ್ಲ. ನೀವೇ ಬಂದಿದ್ದಿರಿ."

—ಎಂದು ಗಂಭೀರತೆಯಿಂದ ಪ್ರದೀಪನು ಹೇಳಿದನು.

"ಅದಕ್ಕೆ ಆಧಾರವೇನಿದೆ ?"

"ನೀವು ಬಂದಿದ್ದೇ ಆಧಾರ. ಅದಕ್ಕಿಂತ ಹೆಚ್ಚಿನ ಆಧಾರವು ಬೇಕಾಗಿಲ್ಲ."

"ನಾವು ಬಂದಿಲ್ಲವೆಂದು ಹೇಳುವೆವು. ಅದಕ್ಕೆ ನೀವೇನು ಹೇಳುವಿರಿ?"

"ಅದಕ್ಕೆ ಆಧಾರವೇನಿದೆ ?"

"ಬೇಕಾದಷ್ಟು ಆಧಾರಗಳಿವೆ. ನಿಮಗೇನು ಆಧಾರ ಬೇಕು ಹೇಳಿ ? ನಾನು ಅಲ್ಲಿಗೆ ಬಂದಿಲ್ಲವೆಂದೂ, ಆ ಕಳ್ಳನು ನಾನಲ್ಲವೆಂದೂ, ಸರಿಯಾದ ಆಧಾರ ತೋರುವೆನು. ಇದಕ್ಕೇನು ಹೇಳುವಿರಿ ? ನೀವು ಸಿಟ್ಟಿನಿಂದ ಹೇಳಿದ ಮಾತ್ರಕ್ಕೆ ನಾವು ತಪ್ಪೊಪ್ಪಿಕೊಳ್ಳುವರೆಂದು ತಿಳಿದಿರಾ ?"

ಪ್ರದೀಪನ ಬಾಯಿ ಒಣಗಿಹೋಯಿತು. ಏನೋ ಕುತಂತ್ರವು ನಡೆದಿದೆಯೆಂದುಕೊಂಡನು.

ಪುರುಷೋತ್ತಮನು ಪುನಃ—

"ನಾವು ಆ ದಿನ ಹೇಳಿದಂತೆ ನಡೆಯುವೆವಲ್ಲದೆ, ಅದಕ್ಕೆ ವ್ಯತಿರಿಕ್ತವಾಗಿ ಎಂದಿಗೂ ನಡೆಯುವುದಿಲ್ಲ ನಿಮ್ಮನ್ನು ವಂಚಿಸಲು ಆ ವೇಷದಲ್ಲಿ ಬರಬೇಕೇ? ನನಗೆ ನಿಮ್ಮ ದ್ರವ್ಯವೇಕೆ ? ನಿಮ್ಮ ಬಟ್ಟೆಬರೆಗಳನ್ನು ಹರಿದುಹಾಕುವುದರಿಂದ ನನಗಾಗುವ ಪ್ರಯೋಜನವೇನಿದೆ ? ಈ ಒಂದು ಸಣ್ಣ ವಿಷಯವನ್ನು ಪರ್ಯಾಲೋಚಿಸದೆ ಪಂಥವನ್ನು ಗೆದ್ದೆನೆಂಬ ಹೆಮ್ಮೆಯಿಂದ ಇಲ್ಲಿಗೆ ಬಂದ ನಿಮ್ಮ ಅವಿವೇಕಕ್ಕೆ ಏನು ಹೇಳಲಿ ? ಇಂತಹ ನೀವು ಕಳ್ಳರನ್ನೂ, ಕೊಲೆಗಾರರನ್ನೂ ಹೇಗೆ ಸೆರೆಹಿಡಿದಿರೋ ಏನೋ. ಆ ವಿಷಯವಾಗಿ ಯೋಚಿಸಿನೋಡಿದರೆ, ಕಳ್ಳರಾರನ್ನೂ ನೀವು ನಿಮ್ಮ ಯುಕ್ತಿ, ಚತುರತೆಯಿಂದ ಸೆರೆಹಿಡಿಯಲಿಲ್ಲವೆಂತಲೂ, ಅವರೇ ಬಂದು ನಿಮ್ಮ ಕೈಸೆರೆಯಾಳಾಗಿರಬಹುದೆಂದೂ ಹೇಳ

ಬಹುದು. ನನ್ನ ಹೆಸರನ್ನು ಕೇಳಿ ಕಳ್ಳರು ತಾವಾಗಿಯೇ ನನ್ನ ಸೆರೆಯಾಳಾದ ರೆಂದು ಹೆಮ್ಮೆಗೊಂಡಿರುವಿರಿ. ಬಾಯಿಚಪಲ ತೀರಿಸಿಕೊಳ್ಳಲು ಚಂದ್ರನಾಥ ನನ್ನು ಅಲ್ಲಗಳೆಯುವಿರಿ. ನೀವು ಹೆಚ್ಚಿನವರಿರಬಹುದಾದರೂ ಇನ್ನೊಬ್ಬರನ್ನು ಕೀಳಾಗಿ ಭಾವಿಸಬೇಡಿ. ಯಾರೊಡನೆ ಸಿಟ್ಟು ತೋರಿಸಬೇಕೆಂಬುದೂ ಸಹ ನಿಮಗೆ ತಿಳಿಯದು. ಪ್ರತಿಯೊಬ್ಬರಲ್ಲಿಯೂ ನಿಮ್ಮ ಸಿಟ್ಟು ನಡೆಯದು. ಇದನ್ನು ತಿಳಿದಿರಿ" ಎಂದು ಹೇಳಿದನು.

ಪುರುಷೋತ್ತಮನ ಪ್ರತಿ ವಾಕ್ಯವೂ ಪ್ರದೀಪನ ದೇಹವನ್ನು ಭರ್ಜಿ ಯಿಂದ ಇರಿದಂತಾಗುತ್ತಿತ್ತು. ಮಾತನಾಡಲು ನಾಲಿಗೆಯೇ ಹೊರಳದಂತಾ ಯಿತು. ಪತ್ತೇದಾರನ ಮಾತಿಗೆ ಏನು ಉತ್ತರ ಹೇಳಬೇಕೆಂಬುದೇ ಆತನಿಗೆ ಆಗ ತೋಚಲಿಲ್ಲ.

ಕೆಲಹೊತ್ತು ಮೌನವಾಗಿದ್ದು ಬಳಿಕ—

"ಹಾಗಾದರೆ ಆ ವೇಷದಲ್ಲಿ ಬಂದವರು ನೀವಲ್ಲವೇ?" ಎಂದು ಕೇಳಿ ದನು.

"ಅಲ್ಲವೆಂದು ಹೇಳಿದೆನಲ್ಲ. ನಾನೇ ಆ ವೇಷದಲ್ಲಿ ಬಂದಿದ್ದೆನೆಂದು ನಿಮಗೆ ಇನ್ನೂ ಅನುಮಾನವಿದೆ. ನಾನಲ್ಲವೆಂಬುದನ್ನು ಈಗಲೇ ಸಿದ್ಧಾಂತ ಪಡಿಸುವೆನು. ನೀವು ಮೊದಲು ತಪ್ಪನ್ನು ಒಪ್ಪಿಕೊಳ್ಳಬೇಕು."

ಪ್ರದೀಪನು ಕೆಲಹೊತ್ತು ಯೋಚಿಸಿ ಬಳಿಕ ವಿಧಿಯಿಲ್ಲದೆ, ತಾನು ವಿವೇ ಕವಿಲ್ಲದೆ ಮಾತನಾಡಿದುದು ತಪ್ಪೆಂದು ಒಪ್ಪಿಕೊಂಡನು.

ಪುರುಷೋತ್ತಮನು ನಕ್ಕು—

"ಇದು ನಿಮ್ಮ ಸೋಲಿನ ಪ್ರಥಮ ಹೆಜ್ಜೆ" ಎಂದನು.

"ಆ ವಿಷಯವೊಂದುಕಡೆ ಇರಲಿ. ನೀವು ಅಲ್ಲಿಗೆ ಬರಲಿಲ್ಲವೆಂಬುದಕ್ಕೆ ಆಧಾರವೇನಿದೆ?"

—ಎಂದು ಪ್ರದೀಪನು ಕೇಳಿದನು.

"ಆಧಾರವೇನು? ನಿಮ್ಮ ಮನೆಗೆ ಬಂದು ನಿಮಗೆ ಅವಮಾನಪಡಿಸಿದ ಕಳ್ಳನನ್ನೇ ತೋರಿಸುವೆನು."

ಚಂದ್ರನಾಥ, ಪ್ರದೀಪರಿಬ್ಬರೂ ಬೆರಗಾದರು.

"ಏನೂ........! ಕಳ್ಳನನ್ನು ತೋರಿಸುವಿರಾ?"

—ಎಂದು ಆಶ್ಚರ್ಯಭರಿತನಾದ ಚಂದ್ರನಾಥನು ಕೇಳಿದನು.

"ತೋರಿಸುವೆನು."

"ಆತನೆಲ್ಲಿರುವನು ? "

"ನನ್ನ ಮನೆಯಲ್ಲಿಯೇ ಇರುವನು."

"ನಿಮ್ಮ ಮನೆಯಲ್ಲಿಯೇ ? "

"ಹೌದು."

ಚಂದ್ರನಾಥನು ಮಾತನಾಡುವ ಮೊದಲೇ ಪ್ರದೀಪನು—

"ಎಲ್ಲಿರುವನು ? ಆತನನ್ನು ತೋರಿಸಿ. ಅವನ ಹಲ್ಲುಗಳನ್ನೆಲ್ಲಾ ಉದುರಿಸುವೆನು" ಎಂದನು.

ಪುರುಷೋತ್ತಮನು ನಕ್ಕು—

"ಆತನಿಂದ ನೀವೇ ಉದುರಿಸಿಕೊಳ್ಳುವ ಸಮಯ ಬಂದಿತ್ತು. ಅವನು ಆ ದಿನ ನಿಮ್ಮನ್ನು ಜೀವಸಹಿತ ಬಿಟ್ಟ ತಪ್ಪಿಗೆ ಅವನ ಹಲ್ಲುದುರಿಸುವೆನೆನ್ನುವಿರಿ" ಎಂದನು.

ಪ್ರದೀಪನ ಮುಖವು ಹರಳೆಣ್ಣೆ ಕುಡಿದವರ ಮುಖದಂತಾಯಿತು. ಮತ್ತೆ ಮಾತನಾಡದೆ ಮೌನನಾದನು.

ಪುರುಷೋತ್ತಮನು ರಾಮನಾಥನ ಮುಖವನ್ನು ನೋಡಲು, ಆತನು ಒಳಗೆ ಹೋಗಿ ಬುಧವಾರ ರಾತ್ರಿ ಪ್ರದೀಪನ ಮನೆಗೆ ನುಗ್ಗಿ ಅವನಿಗೆ ಅವಮಾನ ಮಾಡಿದ ಕಳ್ಳನನ್ನು ಕರೆದುಕೊಂಡು ಬಂದು ಅವರೆಲ್ಲರ ಎದುರಿಗೆ ನಿಲ್ಲಿಸಿದನು.

ಅವನ ಮುಖವನ್ನು ನೋಡುತ್ತಲೇ ಚಂದ್ರನಾಥ, ಪ್ರದೀಪರಿಬ್ಬರೂ ಬೆರಗಾದರು.

ಆತನು ಅವರಿಬ್ಬರಿಗೂ ಚಿರಪರಿಚಿತ ಚೋರನಾಗಿದ್ದನು. ಆತನ ಆತನ ಹೆಸರು ಶೇಷಗಿರಿಯೆಂದಿತ್ತು.

ಶೇಷಗಿರಿಯು ಮೊದಲು ಕಾಂಚೀನಗರದಲ್ಲಿಯೇ ಇದ್ದನು. ಆಗ ಆತನು ಸಬ್‌ರಿಜಿಸ್ಟ್ರಾರ್‌ರವರ ಆಫೀಸಿನಲ್ಲಿ ಕ್ಲಾರ್ಕ್ ಆಗಿದ್ದನು. ಅವನು ಏನೋ ಒಂದು ಉದ್ದೇಶದಿಂದ ಯಾರೂ ಇಲ್ಲದ ವೇಳೆಯಲ್ಲಿ ರಿಕಾರ್ಡುಗಳನ್ನು ಕದಿಯುವ ಉದ್ದೇಶದಿಂದ, ಕಳ್ಳ ಬೀಗದ ಕೈಯನ್ನು ಮಾಡಿಕೊಂಡು, ಬೀಗವನ್ನು

ತೆಗೆದು ರಿಕಾರ್ಡುಗಳನ್ನು ಕದಿಯುವಾಗ, ಆ ಆಫೀಸಿನ ಜವಾನನು ಅದನ್ನು ನೋಡಿ ಅವನನ್ನು ಹಿಡಿಯಲು, ಮೇಲಾಧಿಕಾರಿಗಳು ಆತನನ್ನು ಪೋಲೀಸಿನವರ ವಶಕ್ಕೆ ಒಪ್ಪಿಸಿದರು. ಆಗ ಚಂದ್ರನಾಥನೇ ಅವನನ್ನು ವಿಚಾರಣೆಗೆ ಗುರಿಪಡಿಸಲು ರಿಕಾರ್ಡುಗಳನ್ನು ಕದ್ದನೆಂಬ ಅಪಾದನೆಯ ಮೇಲೆ ಐ.ಪಿ.ಸಿ. ೪೫೪. ೩೮೦ರ ಪ್ರಕಾರ ನ್ಯಾಯಾಧೀಶರು ಶೇಷಗಿರಿಗೆ ಒಂದು ವರ್ಷ ಕಠಿನ ಶಿಕ್ಷೆಯನ್ನು ವಿಧಿಸಿದ್ದರು.

ಶಿಕ್ಷೆಯ ಅವಧಿಯನ್ನು ಮುಗಿಸಿಕೊಂಡು ಬಂದ ಶೇಷಗಿರಿಯು ಕಾಂಚೀ ನಗರದಲ್ಲಿರಲಿಷ್ಟಪಡದೆ ಜಗದೀಶಪುರಕ್ಕೆ ಹೋದನು.

ಅಲ್ಲಿ ದುಷ್ಟರೊಡನೆ ಬೆರೆತು ಜೂಜಾಡುವುದನ್ನು ಕಲಿತು, ಅದನ್ನು ಆಟವಾಡುವಾಗ ಪ್ರದೀಪನ ಕೈಗೆ ಹತ್ತಾರು ಸಾರಿ ಸಿಕ್ಕಿ ಮೈಮೂಳೆಗಳೆಲ್ಲ ಪುಡಿಪುಡಿಯಾಗುವಂತೆ ಏಟುಗಳನ್ನು ತಿಂದಿದ್ದನು. ಆದರೂ ಜಗದೀಶಪುರವನ್ನು ಬಿಡಲಿಷ್ಟಪಡಲಿಲ್ಲ.

ಪ್ರದೀಪನು ಶೇಷಗಿರಿಯ ಮೇಲೆ ಸದಾ ಕಣ್ಣಿಟ್ಟೇ ಇರುತ್ತಿದ್ದನು.

ಒಂದು ದಿನ ಶೇಶಗಿರಿಯು ಜಗದೀಶಪುರವನ್ನು ಬಿಡುವ ಉದ್ದೇಶವುಳ್ಳವನಾಗಿ ಆ ಪುರದ ಶ್ರೀಮಂತರಾದ ಪಂಚಾಕ್ಷರಯ್ಯನವರ ಮನೆಗೆ ರಾತ್ರಿಯ ವೇಳೆ ನುಗ್ಗಿ ಸುಮಾರು ನಾಲ್ಕೈದುಸಾವಿರ ರೂಪಾಯಿಗಳು ಬೆಲೆ ಬಾಳುವ ಒಡವೆಗಳನ್ನು ಕದ್ದು ಓಡಿಹೋಗುವಾಗ ಪ್ರದೀಪನ ಕೈಗೆ ಸಿಕ್ಕಿಬಿದ್ದನು.

ಪ್ರದೀಪನು ಅವನನ್ನು ಪೋಲೀಸ್ ಠಾಣೆಗೆ ಕರೆದುಕೊಂಡು ಹೋಗಿ, ಅವನು ಪುನಃ ತನ್ನ ಜೀವಮಾನದಲ್ಲಿಯೇ ಕಳ್ಳತನದ ಸಹವಾಸಕ್ಕೆ ಹೋಗಬಾರದೆಂಬ ರೀತಿ ಹೊಡೆದು, ಅವನ ಮೇಲೆ ಕಳ್ಳತನದ ಮೊಕದ್ದಮೆಯನ್ನು ಹೂಡಿ ವಿಚಾರಣೆಗೆ ಗುರಿಪಡಿಸಲು ನ್ಯಾಯಾಧೀಶರು ಮೂರು ವರ್ಷಗಳು ಕಠಿನ ಶಿಕ್ಷೆಯನ್ನು ವಿಧಿಸಿದ್ದರು.

ಶೇಷಗಿರಿಗೆ ಪ್ರದೀಪನ ಮೇಲೆ ವಿಪರೀತ ಕೋಪ ಬಂದಿತು. ಹಿಂದೆ ಶಿಕ್ಷೆಗೆ ಗುರಿಮಾಡಿದ್ದ ಚಂದ್ರನಾಥನ ಮೇಲೂ ಅಷ್ಟು ಸಿಟ್ಟು ಬಂದಿರಲಿಲ್ಲ.

ತನ್ನ ಶಿಕ್ಷೆಯು ಮುಗಿದು ಬಿಡುಗಡೆಯಾದನಂತರ, ಪ್ರದೀಪನ ಮೇಲೆ ಸೇಡು ತೀರಿಸಿಕೊಳ್ಳಲು ಸಮಯವನ್ನು ಕಾಯುತ್ತಲೇ ಇದ್ದನು.

ಶೇಷಗಿರಿಯು ಜೈಲಿನಲ್ಲಿರುವಾಗಲೇ ಪ್ರದೀಪನಿಗೂ, ಪುರುಷೋತ್ತಮನಿಗೂ ಪಂಥವಾಯಿತು.

ಪ್ರದೀಪನ ಹಿಂದೆಯೇ ವೇಷಾಂತರದಿಂದ ಸಂಚರಿಸಿಕೊಂಡಿದ್ದು, ಸಮಯ ದೊರೆತಾಗ ಅವನನ್ನು ಮೋಸಗೊಳಿಸಬೇಕೆಂಬ ಯೋಚನೆಯಿಂದ ಪತ್ತೇದಾರರು ವೇಷಾಂತರದಿಂದ ಪ್ರದೀಪನಿಗೆ ತಮ್ಮ ವಿದ್ಯಾ ಚಮತ್ಕಾರವನ್ನು ತೋರಲು ಸಮಯ ನಿರೀಕ್ಷೆಯಲ್ಲಿದ್ದರು.

ಆ ವೇಳೆಗೆ ಶೇಷಗಿರಿಯು ಬಿಡುಗಡೆಯಾಗಿ ಜೈಲಿನಿಂದ ಹೊರಗೆ ಬಂದು ಸೇಡು ತೀರಿಸಿಕೊಳ್ಳಲು ಹವಣಿಸಿಕೊಳ್ಳುತ್ತಿದ್ದನು.

ವೇಷಾಂತರದಿಂದ ತನಗೆ ಮೋಸಗೊಳಸುವ ಪತ್ತೇದಾರರನ್ನು ಹಿಡಿಯುವ ಉದ್ದೇಶವುಳ್ಳವನಾದ ಪ್ರದೀಪನು ತನ್ನ ಪತ್ನಿಯನ್ನು ಚಂಪಾಪುರಕ್ಕೆ ಕಳುಹಿಸಿದ್ದು ಶೇಷಗಿರಿಗೆ ಅನುಕೂಲವೇ ಆಗಿತ್ತು.

ಪ್ರದೀಪನ ಮನೆಗೆ ನುಗ್ಗಿ ಅವನ ಮೇಲೆ ಸೇಡು ತೀರಿಸಿಕೊಳ್ಳುವ ದಿನ ಸಾಯಂಕಾಲ ಐದು ಘಂಟೆ ಸಮಯದಲ್ಲಿ ಪ್ರದೀಪನ ಮನೆಯ ಮುಂದೆ ನಾಲ್ಕಾರು ಸಾರಿ ಓಡಾಡಲು, ಪ್ರದೀಪನ ಹಿಂದೆಯೇ ಇರುತ್ತಿದ್ದ ಪುರುಷೋತ್ತಮನು ಅವನನ್ನು ನೋಡಿ ಸಂದೇಹಗೊಂಡನು.

ರಾಮನಾಥನಿಗೆ ಪ್ರದೀಪನ ಹಿಂದಿರುವಂತೆ ಹೇಳಿ ಆತನು ಶೇಷಗಿರಿಯ ಹಿಂದೆ ಕಾವಲಾದನು

ಪ್ರದೀಪನನ್ನು ಕೊಲ್ಲದೆ, ಅವನಿಗೆ ವಿಚಿತ್ರ ಬಗೆಯಲ್ಲಿ ಹಿಂಸೆ ಕೊಟ್ಟು ಜಗದೀಶಪುರದಿಂದ ಪರಾರಿಯಾಗಬೇಕೆಂಬ ಯೋಚನೆಯು ಶೇಷಗಿರಿಯ ಮನದಲ್ಲಿತ್ತು.

ಆ ದಿನ ರಾತ್ರಿ ಹನ್ನೆರಡು ಘಂಟೆಯನಂತರ ತನ್ನ ಕಳ್ಳ ಬೀಗದೆಸಳಿನಿಂದ ಬಾಗಿಲನ್ನು ತೆಗೆದು ಪ್ರದೀಪನ ಮನೆಯೊಳಗೆ ಹೊಕ್ಕನು.

ಆ ಮನೆಯಲ್ಲಿ ಆಗ ಏನು ನಡೆಯಿತೆಂದು ನಾಲ್ಕನೆಯ ಪರಿಚ್ಛೇದದಲ್ಲಿಯೇ ತಿಳಿಸಿದೆ.

೭

ಪತ್ತೇದಾರರಿಬ್ಬರೂ ಪ್ರದೀಪನ ಮನೆಯ ಹೊರಗೆ ಕಾವಲಾಗಿ ಕಾಯು ತ್ತಲೇ ಇದ್ದರು.

ಶೇಷಗಿರಿಯು ಒಳಗೆ ಹೋಗಿ ಬಹಳ ಹೊತ್ತಾದರೂ ಹೊರಗೆ ಬಾರದ ಪ್ರಯುಕ್ತ, ಸಂದೇಹಗೊಂಡ ಪುರುಷೋತ್ತಮನು ಕಿಟಕಿಯಲ್ಲಿ ತಲೆಹಾಕಿ ನೋಡಿದನು.

ಆ ವೇಳೆಗೆ ಶೇಷಗಿರಿಯು ಪ್ರದೀಪನನ್ನು ಮಂಚಕ್ಕೆ ಬಂಧಿಸಿ, ಒಡವೆ ಗಳನ್ನು ತೆಗೆದುಕೊಳ್ಳುವುದರಲ್ಲಿದ್ದನು.

ಪುರುಷೋತ್ತಮನು ಪ್ರದೀಪನನ್ನೂ, ಕಳ್ಳನನ್ನೂ ನೋಡಿ, ಪ್ರದೀಪನ ದುರಹಂಕಾರಕ್ಕೆ ತಕ್ಕ ಶಿಕ್ಷೆಯಾಯಿತೆಂದುಕೊಂಡನಲ್ಲದೆ, ಕಳ್ಳನು ಪ್ರದೀಪನ ಪ್ರಾಣಹರಣ ಮಾಡಲಾರನೆಂದು ಭಾವಿಸಿ ಎಂದಿನಂತೆ ಬಾಗಿಲ ಬಳಿಗೆ ಬಂದನು.

ಒಂದುವೇಳೆ ಶೇಷಗಿರಿಯು ಪ್ರದೀಪನ ಪ್ರಾಣ ತೆಗೆಯುವ ಹವಣಿಕೆ ಯಲ್ಲಿದ್ದಿದ್ದರೆ ಅವನ ಪ್ರಾಣವುಳಿಸಲು ತನ್ನ ಸಾಹಸ ಚತುರತೆಯಿಂದ ಕಳ್ಳನ ಆಕ್ರಮಣಕ್ಕೆ ಪುರುಷೋತ್ತಮನು ಸಿದ್ಧನಾಗಿ ನಿಂತಿದ್ದನು.

'ಕಳ್ಳನು ಪ್ರದೀಪನ ಪ್ರಾಣವನ್ನು ತೆಗೆಯುವವನಾಗಿದ್ದರೆ, ಅವನನ್ನು ಆ ರೀತಿ ಬಂಧಿಸುತ್ತಿರಲಿಲ್ಲ. ಮನೆಯೊಳಗೆ ಪ್ರವೇಶಿಸಿದಾಗಲೇ ಅವನ ಪ್ರಾಣ ತೆಗೆಯುತ್ತಿದ್ದನು. ಒಟ್ಟಿನಲ್ಲಿ ಇನ್ಸ್‌ಪೆಕ್ಟರನ ಅದೃಷ್ಟವು ಚೆನ್ನಾಗಿದೆ' ಎಂಬ ಯೋಚನೆಯು ಪುರುಷೋತ್ತಮನ ಮನಕ್ಕೆ ಹೊಳೆದಿತ್ತು.

ಶೇಷಗಿರಿಯು ಪ್ರದೀಪನ ಮೇಲಿನ ಸೇಡನ್ನು ತೀರಿಸಿಕೊಂಡು ತನ್ನ ಆತ್ಮಕ್ಕೆ ಶಾಂತಿಯಾಯಿತೆಂದೂ, ಈಗ ಅವನು ಅನುಭವಿಸುವ ಶಿಕ್ಷೆಯೇ

ಸಾಕೆಂದು ಯೋಚಿಸಿ, ಮನೆಯಿಂದ ಹೊರಗೆ ಬರುತ್ತಲೇ, ಹೊರಗೆ ಕಾಯು ತ್ತಿದ್ದ ಪತ್ತೇದಾರರು ಅವನನ್ನು ಅಲ್ಲಿಯೇ ದಸ್ತಗಿರಿ ಮಾಡಿ, ಆ ರಾತ್ರಿಯೇ ಬಾಡಿಗೆ ಕಾರನ್ನು ಗೊತ್ತುಮಾಡಿಕೊಂಡು ಅಪರಾಧಿಯೊಡನೆ ಕಾಂಚೀನಗರಕ್ಕೆ ಹಿಂದಿರುಗಿದ್ದರು.

ಪ್ರದೀಪನು ಬಂಧನದಿಂದ ಬಿಡುಗಡೆಯಾಗಿ, ಎರಡನೆಯ ದಿನ ಕಾಂಚೀ ನಗರಕ್ಕೆ ಬಂದದ್ದೂ, ಬಳಿಕ ನಡೆದ ವಿಷಯವೂ, ಓದುಗರ ಹೃತ್ಪಟಲದಿಂದ ಇಷ್ಟು ಜಾಗ್ರತೆ ದೂರಾಗಿಲ್ಲ.

ಪ್ರದೀಪನು ಬೆಕ್ಕಸಬೆರಗಾಗಿ ಶೇಷಗಿರಿಯ ಮುಖವನ್ನೇ ನೋಡು ತ್ತಿದ್ದನು.

ರಾಮನಾಥನು, 'ಸಾಮಾನ್ಯ ಒಬ್ಬ ಕಳ್ಳನನ್ನು ಹಿಡಿಯಲು ಅಸಮರ್ಥ ನಾದ ನೀನು ನಮ್ಮ ಬಳಿಯಲ್ಲಿ ನಿನ್ನ ಪೌರುಷವನ್ನು ಹೇಳಿಕೊಳ್ಳುವೆಯಾ ?' ಎಂದು ಹೇಳಿದ ಮಾತು ಪ್ರದೀಪನ ಜ್ಞಾಪಕಕ್ಕೆ ಪುನಃ ಪುನಃ ಹೊಳೆದು ಈ ವಿಷಯವನ್ನು · ಎತ್ತಿಯೇ ಅವನು ತನಗೆ ಅವಹೇಳನ ಮಾಡಿರುವನೆಂದು ಕೊಂಡನು.

ಪ್ರದೀಪನ ಮನೆಯಿಂದ ಹೊರಗೆ ಬಂದನಂತರ ತನ್ನನ್ನು ದಸ್ತಗಿರಿ ಮಾಡಿದವರಾರೆಂದು, ಶೇಷಗಿರಿಗೆ ತಿಳಿಯಲಿಲ್ಲ. ಆತನನ್ನು ದಸ್ತಗಿರಿ ಮಾಡು ತ್ತಲೇ ದಿಗ್ಭ್ರಮೆಗೊಂಡು ಅವನು ಬಿಡಿಸಿಕೊಳ್ಳಲು ಎಷ್ಟು ಒದ್ದಾಡಿದರೂ ಸಾಧ್ಯವಾಗದೆ ಹೋಗಿತ್ತು.

ಕಾಂಚೀನಗರಕ್ಕೆ ಬಂದು, ಪುರುಷೋತ್ತಮನ ಮನೆಯೊಳಗೆ ಹೋದ ನಂತರ ತನ್ನ ದಸ್ತಗಿರಿ ಮಾಡಿದವನು ಪುರುಷೋತ್ತಮನೆಂದು ತಿಳಿದಿತ್ತು.

ಚಂದ್ರನಾಥ, ಪ್ರದೀಪರಿಬ್ಬರೂ ಶೇಷಗಿರಿಯ ಮುಖವನ್ನೇ ನೋಡು ತ್ತಿರಲು, ಆತನು ಸ್ವಲ್ಪ ಮಾತ್ರವೂ ಖಿನ್ನಭಾವನಾಗಿರದೆ, ಗಂಭೀರನಾಗಿ ನಿಂತಿದ್ದನು.

ಪುರುಷೋತ್ತಮನು ಪ್ರದೀಪನಿಗೆ—

"ನಿಮ್ಮ ಮನೆಗೆ ನುಗ್ಗಿ, ನಿಮ್ಮ ಕೈಕಾಲುಗಳನ್ನು ಕಟ್ಟಿ, ಹಣವನ್ನೆಲ್ಲಾ ಅಪಹರಿಸಿ, ಬಟ್ಟೆಗಳನ್ನೆಲ್ಲಾ ಹರಿದು ಹಾಕಿದವನು ಇವನೇ" ಎಂದು ಹೇಳಿ ದನು.

ಚಂದ್ರನಾಥನು ಶೇಷಗಿರಿಯ ಪರಿಚಯವನ್ನು ಹೇಳಿದನಲ್ಲದೆ, ಹಿಂದೆ ಆತನಿಗೆ ಶಿಕ್ಷೆಯಾದುದನ್ನೂ ಹೇಳಿದನು.

ಪುರುಷೋತ್ತಮನು ನಕ್ಕು—

"ಆ ವಿಷಯವನ್ನೆಲ್ಲಾ ನಾನು ಕೇಳಿ ತಿಳಿದೆನು. ನೀವು ಈತನಿಗೆ ಹೊಡೆದುದರಿಂದಲೇ ನಿಮ್ಮ ಮೇಲೆ ಸೇಡು ತೀರಿಸಿಕೊಳ್ಳಲು ಬಂದದ್ದು. ನಾನು ಈತನ ಮೇಲೆ ಸಂದೇಹಗೊಂಡು, ಹಿಡಿದುದರಿಂದ ಸರಿಹೋಯಿತು. ಇಲ್ಲದೇ ಹೋಗಿದ್ದರೆ ಈ ವೇಳೆಗೆ ಇವನು ಎಲ್ಲಿರುತ್ತಿದ್ದನೋ ಏನೋ. ನಿಮ್ಮ ಅನುಮಾನವು ದೂರಾಗುತ್ತಿರಲಿಲ್ಲ. ನನ್ನ ಮೇಲೆಯೇ ಸಂದೇಹಗೊಳ್ಳುತ್ತಿದ್ದಿರಿ. ಅಲ್ಲವೇ ?" ಎಂದು ಕೇಳಿದನು.

ಪ್ರದೀಪನು ಮಾತನಾಡಲಿಲ್ಲ. ಪತ್ತೇದಾರರೊಡನೆ ಸಂಥ ಕಟ್ಟಿಕೊಂಡಿದ್ದಕ್ಕೆ ಸಾಮಾನ್ಯ ಕಳ್ಳನೊಬ್ಬನಿಂದ ಅವಮಾನವಾಯಿತಲ್ಲದೆ, ಕಳ್ಳನನ್ನೂ ಇವರೇ ಹಿಡಿಯುವಂತಾಯಿತೇ ? ಎಂದು ನೊಂದುಕೊಂಡನು.

ಚಂದ್ರನಾಥನು ಕಳ್ಳನನ್ನು ಹೇಗೆ ಹಿಡಿದಿರೆಂದು ಪುರುಷೋತ್ತಮನನ್ನು ಕೇಳಲು, ಆತನು ಶೇಷಗಿರಿಯ ಮೇಲೆ ಸಂದೇಹಗೊಂಡಲಾಗಾಯ್ತು, ಅಪರಾಧಿಯೊಡನೆ ಕಾಂಚೀನಗರಕ್ಕೆ ಹಿಂದಿರುಗುವವರೆವಿಗೆ ನಡೆದ ವಿಶೇಷ ಚಮತ್ಕಾರದ ಘಟನೆಯನ್ನೆಲ್ಲಾ ಹೇಳಲು ಚಂದ್ರನಾಥ, ಪ್ರದೀಪರಿಬ್ಬರೂ ಪತ್ತೇದಾರರ ಸಾಹಸ, ಚತುರತೆಗೆ ಬೆರಗಾದರಲ್ಲದೆ ಶೇಷಗಿರಿಯೂ ಸಹ ಮಂತ್ರಮುಗ್ಧನಂತಾದನು.

ಚಂದ್ರನಾಥನು ಪ್ರದೀಪನಿಗೆ—

"ಪ್ರದೀಪಾ ! ಪುರುಷೋತ್ತಮನು ದಗಲ್ಬಾಜಿ ಕೆಲಸ ಮಾಡಿರುವನೆಂದು ಹೇಳಿದೆ. ಈಗ ಯಾರು ದಗಲ್ಬಾಜಿ ಕೆಲಸ ಮಾಡಿರುವರು ? ಹೇಳು ? ಪುರುಷೋತ್ತಮನೊಬ್ಬ ದರೋಡೆಕೋರನೆಂತಲೂ, ಅವನಿಗೆ ಬಿರುದು ಬಾವಲಿಗಳಿಲ್ಲವೂ ಕೇಡೆಂದೂ ಹೇಳಿದೆ. ಈಗ ಇದಕ್ಕೆ ನಿನ್ನ ಉತ್ತರವೇನು ? ಹೇಳು ? ನನಗೆ ತಲೆ ಕೆಟ್ಟಿರುವುದೆಂದೂ, ಗಾಂಜಾ ತಪ್ಪಿದರೆ ಅಫೀಂ ಸೇವಿಸಿರುವೆಯೆಂದೂ ಹೇಳಿದೆ. ಈಗ ಯಾರಿಗೆ ತಲೆ ಕೆಟ್ಟಿದೆ ? ಯಾರು ಗಾಂಜಾ ಅಫೀಂ ಸೇವಿಸಿರುವರು ? ಹೇಳು ? ಮನುಷ್ಯನ ತಲೆಯನ್ನು ನೋಡಿ ನಾನು ಕುರಿ ತಲೆಯೆಂದು ಹೇಳುವ ಅವಿವೇಕಿ. ನೀನಾದರೋ ಕುರಿ ತಲೆಯನ್ನು

ನೋಡಿ ಅದನ್ನು ಮನುಷ್ಯರ ತಲೆಯೆಂದು ಹೇಳುವಷ್ಟು ಬುದ್ಧಿವಂತನಾಗಿರುವೆ. ನೀನು ಅಲ್ಪನೋ? ನಾನು ಅಲ್ಪನೋ? ಅಥವಾ ಪತ್ತೇದಾರರು ಅಲ್ಪರೋ? ಹೇಳು. ಇನ್ಸ್‌ಪೆಕ್ಟರ್ ಕೆಲಸಕ್ಕೆ ನೀನೊಬ್ಬನೇ ಅರ್ಹನು, ಅಲ್ಲವೇ? ಉಳಿದವರೆಲ್ಲರೂ ಲಂಚಕೋರರು, ಸೋಮಾರಿಗಳು ಅಲ್ಲವೇ? ಈಗಾದರೂ ನಿನ್ನ ಗರ್ವವಡಗಿತೇ?" ಎಂದು ಕೇಳಿದನು.

ಪ್ರದೀಪನು ಚಂದ್ರನಾಥನ ಒಂದು ಮಾತಿಗೂ ಪ್ರತ್ಯುತ್ತರವೀಯಲಿಲ್ಲ. ಸಾಮಾನ್ಯ ಕಳ್ಳನೊಬ್ಬನಿಂದ ತನ್ನ ಜೀವಮಾನ ಪರ್ಯಂತರ ಮರೆಯಲಾಗದಂತಹ ಅವಮಾನವಾಯಿತೇ? ಎಂದು ನೊಂದುಕೊಂಡನು.

ಪುರುಷೋತ್ತಮನ ಮಾತಿಗೆ ಮೌನವಾಗಿ ಕುಳಿತ್ತಿದ್ದ ರಾಮನಾಥನು ಕೊಂಚ ಕೋಪದಿಂದಲೇ—

"ಕಳ್ಳನಿಂದ ಅವಮಾನವಾದ ಮಾತ್ರಕ್ಕೆ ಗರ್ವವಡಗಿತೆಂದು ಹೇಳಲಾಗದು. ಹಿಂದೆ ಮಾತನಾಡಿದಂತೆ ನಮ್ಮಿಂದ ಬಹಿರಂಗವಾಗಿ ಮೋಸಹೋಗಬೇಕು. ಆಗ ಅವಮಾನವೂ ಆಗುವುದಲ್ಲದೆ, ದುರಹಂಕಾರವೂ ದೂರಾಗಬಹುದು" ಎಂದನು.

ರಾಮನಾಥನ ಮಾತಿಗೆ ಪ್ರದೀಪನಿಗೆ ಸಿಟ್ಟು ಬಂದಿತಾದರೂ ತೋರ್ಪಡಿಸಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಹೊಟ್ಟೆಯಲ್ಲಿ ಸಿಟ್ಟಿದ್ದರೂ ರೆಟ್ಟೆಯಲ್ಲಿ ಬಲವಿಲ್ಲದಂತಾಯಿತು.

'ಸಾಮಾನ್ಯ ಒಬ್ಬ ಕಳ್ಳನಿಂದ ನನಗೆ ವಿಶೇಷ ಅವಮಾನವಾಯಿತು. ಅದರ ಮೇಲೆ ಈ ಕಳ್ಳನನ್ನು ಪತ್ತೇದಾರರೇ ಕೈಸೆರೆ ಹಿಡಿದುದರಿಂದ ಇನ್ನೂ ಹೆಚ್ಚಿನ ಅವಮಾನವಾಯಿತು. ಈ ಅವಮಾನವನ್ನು ಸಹಿಸಿಕೊಂಡಿರುವುದಕ್ಕಿಂತ ಸಾಯುವುದೇ ಮೇಲು. ಸತ್ತರೆ ಬದುಕಿ ಬಾಳಲಾರದ ಹೇಡಿಯು ಆತ್ಮಹತ್ಯೆ ಮಾಡಿಕೊಂಡನೆನ್ನುವರು. ತಪ್ಪಿದರೆ ಕಳ್ಳನಿಂದ ಅವಮಾನಿತನಾಗಿ, ಆ ಅವಮಾನವನ್ನು ಸಹಿಸಲಾರದೆ ಪ್ರಾಣತ್ಯಾಗ ಮಾಡಿಕೊಂಡನೆಂದು ಹೇಳುವರು. ಪತ್ರಿಕೆಗಳಲ್ಲಿಯೂ ಪ್ರಕಟಿಸುವರು. ಈವರೆವಿಗೆ ಗಳಿಸಿದ ಕೀರ್ತಿಯೆಲ್ಲಾ ಆಗ ಅಳಿಸಿಹೋಗುವುದು. ಆದ್ದರಿಂದ ಆತ್ಮಹತ್ಯೆ ಮಾಡಿಕೊಳ್ಳುವುದು ಸರಿಯಲ್ಲ. ನಾನು ಗಂಡಸಾಗಿ, ವೈರಿಗಳ ವೀರನಾಗಿದ್ದು ಆತ್ಮಹತ್ಯೆ ಮಾಡಿಕೊಳ್ಳುವುದೇ? ಅದು ಸರಿಯಲ್ಲ. ಈಗ ಅಳಿಸಿಹೋದ ಕೀರ್ತಿಯನ್ನು

ಪುನಃ ಗಳಿಸಿಕೊಳ್ಳಬೇಕು. ಅದಕ್ಕೆ ಸರಿಯಾದ ದಾರಿಯೇನೆಂದರೆ:-ಈ ಪತ್ತೇ ದಾರರು ನನಗೆ ಮೋಸಪಡಿಸಲು ಪ್ರಯತ್ನಿಸಿದಾಗ ಯಾವ ರೀತಿಯಿಂದ ಲಾದರೂ, ಪತ್ತೇವಾಡಿ ಹಿಡಿದರೆ ಅಳಿಸಿದ ಕೀರ್ತಿಯು ಪುನಃ ಬರುವುದರಲ್ಲಿ ಸಂದೇಹವಿಲ್ಲ. ಅಲ್ಲಿಗೆ ಇಬ್ಬರೂ ಅವಮಾನಿತರಾದಂತಾಗುತ್ತದೆ. ಯಾರ ವಿಷಯವನ್ನು ಯಾರೂ ಬಹಿರಂಗಪಡಿಸಲಾರರು. ಅದೇ ಸರಿಯಾದ ದಾರಿ. ಇವರೇನಾದರೂ ನಾನು ಕಳ್ಳನಿಂದ ಅವಮಾನ ಪಟ್ಟಿದ್ದನ್ನು ಹೇಳಿದರೆ, ನನಗೂ ಸಹ ಇವರ ವಿಷಯವನ್ನು ಹೇಳಿ ಅವಹೇಳ ಮಾಡಲು ಅವಕಾಶವಿರುತ್ತದೆ.' ಎಂಬುದಾಗಿ ಪ್ರದೀಪನು ಯೋಚಿಸಿಕೊಂಡನು.

ಚಂದ್ರನಾಥನಿಗೆ ಇನ್ನೂ ಮನಸ್ಸು ತಡೆಯದ ಪ್ರಯುಕ್ತ ಪ್ರದೀಪನಿಗೆ ಮತ್ತೆ ಅವಮಾನ ಪಡಿಸಬೇಕೆಂದು—

"ಪ್ರದೀಪಾ ! ಕೈಲಾಗದ ಹೇಡಿಯಾರು ? ಮೈಯೆಲ್ಲಾ ಪರಚಿಕೊಂಡ ವನಾರು ? ಯಾರನ್ನು ಮಾದಿಗನೆನ್ನಬೇಕು ? ಯಾರನ್ನು ನೀಚನೆನ್ನಬೇಕು ?" ಎಂದು ಕೇಳಿದನು.

ಪ್ರದೀಪನಿಗೆ ಸಿಟ್ಟು ಬಂದಿತಾದರೂ, ಮಾತನಾಡದೆ ಕೆಂಗಣ್ಣುಗಳಿಂದ ಚಂದ್ರನಾಥನನ್ನು ನೋಡಿದನು.

ಚಂದ್ರನಾಥನು ಜೋರಾಗಿ ನಕ್ಕು—

"ಅಪರಾಧಿಗಳನ್ನು ನೋಡುವಂತೆ ನನ್ನನ್ನು ನೋಡಿದರೆ ನಾನು ಬೆದರು ತ್ತೇನೆಯೇ ? ನೀನು ಯಾವ ಪದವಿಯಲ್ಲಿರುವೆಯೋ ನಾನು ಸಹ ಅದೇ ಪದ ವಿಯಲ್ಲಿರುವೆನು. ನೀನಾದರೋ ಚಿಕ್ಕ ಊರಿನಲ್ಲಿರುವೆ. ನಾನು ನಗರದಲ್ಲಿ ರುವೆನು. ಬಾಯಿಗೆ ಬಂದತೆ ಮಾತನಾಡಿದಾಗ ಮೌನನಾಗಿದ್ದೆನೆಂದು, ಕೆಂಗ ಣ್ಣುಗಳಿಂದ ನೋಡಿ ಬೆದರಿಸುವೆಯಾ ? ಅದೆಲ್ಲಾ ನಡೆಯದು. ಆಗ ಮಾತ ನಾಡಿದಂತೆ ಈಗ ಮಾತನಾಡು ? ಸಾಮಾನ್ಯ ಒಬ್ಬ ಕಳ್ಳನಿಂದ ಕೈ ಕಾಲುಗ ಳನ್ನು ಕಟ್ಟಿಸಿಕೊಂಡ ನೀನು, ಪ್ರಖ್ಯಾತರೆನಿಸಿಕೊಂಡ ಈ ಪತ್ತೇದಾರರೊಡನೆ ಪಂಥ ಕಟ್ಟಿ ಗೆಲ್ಲಬಲ್ಲೆಯಾ ? ನಿನ್ನಂತಹ ನೂರಾರು ಇನ್ಸ್ಪೆಕ್ಟರುಗಳು ಇವರ ಲ್ಲಿಗೆ ಬಂದು ಸಲಹೆ ಕೇಳುತ್ತಿರುವಾಗ, ನೀನೊಬ್ಬನು ಮಾತ್ರ ಆಷಾಢಭೂತಿ ಪತ್ತೇದಾರನೆಂದು ಜರಿದು ಮಾತನಾಡಿದೆ. ಮನುಷ್ಯನಿಗ ಗರ್ವವಿದ್ದರೆ, ಆ ಗರ್ವವು ಅವನನ್ನೇ ಹಾಳು ಮಾಡುವುದಲ್ಲದೆ, ಇತರರನ್ನು ಕೆಡಿಸುವುದಿಲ್ಲ.

ಇನ್ನೂ ನಿನ್ನ ಗರ್ವವು ನಿನ್ನ ಹೃದಯದಿಂದ ಬೇರ್ಪಟ್ಟಿಲ್ಲ. ಕ್ಷಿಪ್ರದಲ್ಲಿಯೇ ಅದರ ಪ್ರತಿಫಲವನ್ನು ಅನುಭವಿಸುವೆ" ಎಂದು ಹೇಳಿದನು.

ಚುಚ್ಚು ಮಾತುಗಳಿಂದ ತನ್ನ ಮನ ನೋಯಿಸುತ್ತಿರುವನೆಂದು ಪ್ರದೀಪನು ಭಾವಿಸಿಕೊಂಡನಾದರೂ, ಮಾತಿಗೆ ಪ್ರತಿ ಮಾತನಾಡಿ ಮನಸ್ಸಿಗೆ ಸಮಾಧಾನ ತಂದುಕೊಳ್ಳುವ ಸ್ಥಿತಿಯಲ್ಲಿರಲಿಲ್ಲ.

ಅಪರಾಧಿಯಾಗಿ ನಿಂತಿದ್ದ ಶೇಷಗಿರಿಯೂ ಅವರ ಮಾತುಗಳನ್ನು ಅತ್ಯಂತ ಕುತೂಹಲದಿಂದ ಕೇಳುತ್ತಾ ನಿಂತಿದ್ದನು.

ಆತನಿಂದ ಪುರುಷೋತ್ತಮನು ವಿಷಯವನ್ನೆಲ್ಲಾ ಕೇಳಿ ತಿಳಿದಿದ್ದ ಪ್ರಯುಕ್ತ, ಮತ್ತೆ ಅವನೊಡನೆ ಮಾತನಾಡಬೇಕಾದ ಪ್ರಮೇಯವಿರಲಿಲ್ಲ.

ಚಂದ್ರನಾಥನ ಮಾತಿಗೆ ಮನನೊಂದ ಪ್ರದೀಪನು ಕೆಲ ಹೊತ್ತು ಮೌನನಾಗಿದ್ದು ಬಳಿಕ—

"ಚಂದ್ರನಾಥ! ಇನ್ನು ನಿನ್ನ ನಾಲಿಗೆಯನ್ನು ಬಿಗಿ ಹಿಡಿ. ಕಲಿತ ಮಾತು ಖರ್ಚು ಮಾಡಬೇಡ. ನಾಳೆಗೂ ಕೊಂಚವಿರಲಿ" ಎಂದನು.

ಚಂದ್ರನಾಥನು ಹಿಂಜರಿಯಲಿಲ್ಲ.

"ನಾಳೆಯದಿನ ಆಡುವ ಮಾತು ಬೇರೆ ಇದೆ. ಈ ದಿನ ಆಡಿ ಮುಗಿಸಬೇಕಾದ ವಿಷಯವೇ ಬೇರೆ. ನಿನ್ನ ಹಾಗೆ ಕಲಿತ ಮಾತು ಒಪ್ಪಿಸುತ್ತಿಲ್ಲ. ಮಾತಿಗೆ ಮಾತು ಜೋಡಿಸಿ ಹೇಳುತ್ತಿರುವೆನು. ಇದರಲ್ಲಿ ತಪ್ಪೇನಿದೆ ?"

ಪ್ರದೀಪನಿಗೆ ಅಲ್ಲಿ ಕುಳಿತುಕೊಳ್ಳಲಾಗಲಿಲ್ಲ.

ಎದ್ದು ನಿಂತು—

"ಇನ್ನು ಹೋಗೋಣ ನಡೆ" ಎಂದನು.

ಇನ್ನೂ ಈತನ ಗರ್ವವು ಅಡಗಿಲ್ಲವೆಂದು ಪುರುಷೋತ್ತಮನು ಭಾವಿಸಿಕೊಂಡನಲ್ಲದೆ, ಮುಂದೆ ಈತನ ಅಹಂಕಾರವು ಅಡಗುವುದರಲ್ಲಿ ಸಂದೇಹವಿಲ್ಲವೆಂದುಕೊಂಡನು.

ಚಂದ್ರನಾಥನೂ ನಗುತ್ತಾ ಎದ್ದು ನಿಂತನು.

ಬಳಿಕ ಅಪರಾಧಿಯನ್ನು ಕರೆದುಕೊಂಡು ಪೋಲೀಸ್ ಠಾಣೆಗೆ ಹೊರಟರು.

ಅವರು ಹೊರಟುಹೋದನಂತರ ರಾಮನಾಥನು—

"ಮಿತ್ರಾ! ಈ ಪ್ರದೀಪನ ಅಹಂಕಾರವು ಇನ್ನೂ ಅಡಗಿಲ್ಲ. ಇವನಿಗೆ ಸರಿಯಾದ ಶಿಕ್ಷೆಯಾಗಬೇಕು" ಎಂದು ಹೇಳಿದನು.

"ಆ ವಿಷಯವು ನನಗೂ ತಿಳಿದಿದೆ. ನಮ್ಮಲ್ಲಿ ಪ್ರತಿಜ್ಞೆ ಮಾಡಿದನಂತರ ಕಳ್ಳನಿಂದ ಅವಮಾನವಾಯಿತು. ಮತ್ತೆ ಅವಮಾನವಾಗುವುದೋ ಏನೋ. ನಾವೂ ಒಂದು ಸಾರಿ ಅವಮಾನಪಡಿಸಬೇಕಾಗಿದೆ."

—ಎಂದು ಪುರುಷೋತ್ತಮನು ನುಡಿದನು.

"ಯಾವ ಕಳ್ಳನಿಂದ ಈತನು ಅವಮಾನಿತನಾದನೋ, ಆ ಕಳ್ಳನನ್ನು ನಾವು ಸೆರೆಹಿಡಿದಿದ್ದರೂ ಇವನ ಗರ್ವವು ಅಡಗಿಲ್ಲವಲ್ಲ. ಇಂತಹ ಅವಿವೇಕಿಯ ಹೀನ ಬುದ್ಧಿಗೆ ಏನು ಹೇಳಲಿ ? "

"ಏನು ಹೇಳಿದರೂ ಪ್ರಯೋಜನವಿಲ್ಲ. ಇದೇ ರೀತಿ ಇನ್ನೂ ನಾಲ್ಕಾರು ಸಾರಿ ಅವಮಾನಿತನಾದರೆ ಆಗ ಇವನ ಅಹಂಕಾರವು ಅಡಗಬಹುದು. ಇಲ್ಲದೇ ಹೋದರೆ ಹೋಗಲಾರದು."

"ನಾವು ಯಾವ ರೀತಿ ಅವಮಾನ ಪಡಿಸೋಣ ? "

"ನಮಗೆ ಅನುಕೂಲ ಬಂದ ರೀತಿಯಲ್ಲಿ ಅವಮಾನ ಪಡಿಸೋಣ. ಆಗ ಇವನ ಗರ್ವವು ಅಡಗುವುದೋ ಇಲ್ಲವೋ ತಿಳಿಯುತ್ತದೆ."

"ಈತನು ಬಲಪ್ರದರ್ಶನಕ್ಕೇನಾದರೂ ಬಂದರೆ ಇವನ ಜೀವಾವಧಿ ಮರೆಯದಂತಹ ಘಾತವುಂಟುಮಾಡುವೆನು. ಆ ವಿಷಯವಾಗಿ ಕೊಂಚ ಪ್ರಸ್ತಾಪ ಮಾಡಿದರೆ ಸಾಕು, ನಾನು ನೋಡಿಕೊಳ್ಳುವೆನು. ಮತ್ತೆ ಎಂದೆಂದಿಗೂ ಮರೆಯಬಾರದು."

ಪುರುಷೋತ್ತಮನು ನಕ್ಕು—

"ನಿನ್ನೊಡನೆ ಹೋರಾಡುವವರು ಬೇರೆ ಇರುವರು. ನಮ್ಮಿಂದ ಹಿಡಿಯಲ್ಪಟ್ಟು ಶಿಕ್ಷೆಗೊಳಗಾಗಿದ್ದ *ಭಯಂಕರ ಬೈರಾಗಿಯಾದ ಕಳಿಂಗನೂ, ಆತನ ನೆರಳಿನಂತಿದ್ದ ಪರಮಶಿವನೂ ಜೈಲಿನಿಂದ ತಪ್ಪಿಸಿಕೊಂಡಿರುವುದು ನಿನಗೆ ತಿಳಿದೇ ಇದೆ. ಮುಂದೆ ಆ ಪರಮಶಿವನೊಡನೆ ಹೋರಾಡುವ ಸನ್ನಿವೇಶ ಬಂದರೂ ಬರಬಹುದು. ಆಗ ಅವನೊಡನೆ ಹೊಡೆದಾಡುವೆಯಂತೆ. ಹಿಂದೆ

---

***ಭಯಂಕರಬೈರಾಗಿ**—ಪುರುಷೋತ್ತಮನ ಒಂಭತ್ತನೆಯ ಸಾಹಸ.

ಒಂದು ಸಾರಿ ಹೊಡೆದಾಡಿಯೂ ಇರುವೆ. ಅವರಿಬ್ಬರೂ ಈಗ ×ಕೆರಳಿದ ಕೇಸರಿಗಳಂತಾಗಿ ನಮ್ಮ ಮೇಲೆ ಸೇಡು ತೀರಿಸಿಕೊಳ್ಳಲು ಪ್ರಯತ್ನಿಸುತ್ತಿರಬಹುದು. ಹಿಂದೆ ಪರಮಶಿವನು ಆಡಿದ ಮಾತು ನಿನ್ನ ಜ್ಞಾಪಕದಲ್ಲಿರಬಹುದು. ಅವನ ಮೇಲೆ ಹೊಡೆದಾಡುವೆಯಂತೆ. ಅದನ್ನು ಬಿಟ್ಟು ಈ ಇನ್ಸ್‌ಪೆಕ್ಟರಿನ ಮೇಲೆ ಬಲಪ್ರದರ್ಶನ ತೋರಿಸುವೆನೆನ್ನುವೆಯಲ್ಲ" ಎಂದು ಹೇಳಿದನು.

"ಈಗ ಅವರಿಬ್ಬರೂ ಎಲ್ಲಿರುವರು ? "

"ಎಲ್ಲಿರುವರೋ, ಏನೋ. ಎಲ್ಲಿಯೋ ದೂರದೇಶದಲ್ಲಿರಬಹುದು. ಮುಂದೆ ಕೆಲವು ಕಾಲಾನಂತರ ಇಲ್ಲಿಗೆ ಬರುವರೆಂದೇ ನನ್ನ ಅಭಿಪ್ರಾಯವಾಗಿದೆ."

"ಈಗಲೇ ಬಂದರೆ ಏನಾಗುತ್ತದೆ."

"ಈಚೆಗೆ ಅವರು ಜೈಲಿನಿಂದ ತಪ್ಪಿಸಿಕೊಂಡಿರುವುದರಿಂದ ಅವರ ವಿಷಯವಾಗಿ ಸಾಮಾನ್ಯವಾಗಿ ಎಲ್ಲರೂ ಎಚ್ಚರಗೊಂಡಿರುತ್ತಾರೆ. ಆದ್ದರಿಂದ ಈ ವೇಳೆಯಲ್ಲಿ ಇಲ್ಲಿರುವುದು ಸರಿಯಲ್ಲವೆಂಬ ಅಭಿಪ್ರಾಯದಿಂದ ದೂರದೇಶಕ್ಕೆ ಹೋಗಿರಬಹುದು. ಅವರ ಶೋಧನೆಗಾಗಿ ಎಲ್ಲೆಲ್ಲಿಯೂ ಸಿ.ಐ.ಡಿ.ಗಳು ತುಂಬಿಕೊಂಡಿರುವುದರಿಂದಲೂ, ಅವರಿಬ್ಬರೂ ಈವರೆವಿಗೆ ಸಿಕ್ಕದೆ ಇರುವುದರಿಂದಲೂ, ದೂರದೇಶಕ್ಕೆ ಹೋಗಿ ವೇಷಾಂತರದಿಂದ ಕಾಲಹರಣೆ ಮಾಡಿಕೊಂಡಿರುವರೆಂದೇ ನನ್ನ ಅಭಿಪ್ರಾಯ. ಕೆಲವು ಕಾಲಾನಂತರ ಅವರ ವಿಷಯವಾಗಿ ಪೋಲೀಸ್ ಅಧಿಕಾರಿಗಳು ಉದಾಸೀನರಾಗುವರು. ಇತರರೂ ಅವರನ್ನು ಮರೆಯುವಂತಾಗುವರು. ಆಗ ಅವರು ಈ ನಗರಕ್ಕೆ ಬರುವರೆಂದು ನನಗೆ ನಂಬಿಕೆಯಿದೆ."

"ನಮ್ಮ ಮೇಲೆ ಸೇಡು ತೀರಿಸಿಕೊಳ್ಳುವ ನಿಮಿತ್ತವಾಗಿಯೇ ಬರುವರಲ್ಲವೇ ? "

"ಹೌದು ! ಪರಮಶಿವನು ಅದೇ ರೀತಿ ನುಡಿದಿರುವನು. ಆತನು ಮುಂದೆ ಯಾವುದೋ ಒಂದು ಬಗೆಯಲ್ಲಿ ನಿನ್ನ ಮೇಲೆ ಹೊಡೆದಾಟಕ್ಕೆ ಬರುವುದರಲ್ಲಿ ಸಂದೇಹವಿಲ್ಲ."

---

×**ಕೆರಳಿದಕೇಸರಿ**—ಭಯಂಕರ ಬೈರಾಗಿ ಉತ್ತರಾರ್ಧ.

"ಅದಕ್ಕೆ ನಾನು ಹೆದರುವುದೇ ಇಲ್ಲ. ಅವನು ಯಾವ ವೇಳೆಯಲ್ಲಿ ಬಂದರೂ ಸರಿ, ನಾನು ಅವನೊಡನೆ ಹೋರಾಡಲು ಸಿದ್ಧನಾಗಿಯೇ ಇರುವೆನು."

ಪುರುಷೋತ್ತಮನು ನಕ್ಕನು.

ಮತ್ತೆ ರಾಮನಾಥನು—

"ಈಗ ಶೇಷಗಿರಿಯ ಮೇಲೆ ಪ್ರದೀಪನು ಸೇಡು ತೀರಿಸಿಕೊಳ್ಳುವನಲ್ಲವೇ ?" ಎಂದನು.

"ಆ ವಿಷಯವೆಲ್ಲಾ ನಮಗೇಕೆ ? ಅಪರಾಧಿಯನ್ನು ಹಿಡಿದು ಅವರ ವಶಕ್ಕೆ ಒಪ್ಪಿಸಿದ್ದಾಯಿತು. ಇನ್ನು ಮುಂದಿನ ಕಾರ್ಯವೆಲ್ಲಾ ಅವರಿಗೆ ಸೇರಿದೆ."

"ಹೌದು ! ನಿಜ."

"ಇನ್ನು ಮಾತನಾಡುತ್ತಾ ವೇಳೆ ಕಳೆಯುವುದು ಅನಾವಶ್ಯಕ. ಮುಂದಿನ ಕಾರ್ಯದ ಬಗ್ಗೆ ಯೋಚಿಸಿ ಕಾರ್ಯೋನ್ಮುಖರಾಗೋಣ."

"ಹಾಗೇ ಆಗಲಿ."

ಪತ್ತೇದಾರರು ಮುಂದಿನ ಕಾರ್ಯದ ಬಗ್ಗೆ ಕೆಲಹೊತ್ತು ಮಾತನಾಡುತ್ತಾ ಕುಳಿತಿದ್ದು, ಬಳಿಕ ಹಾಗೇ ತಿರುಗಾಡಿಕೊಂಡು ಬರಲು ಹೊರಗೆ ಹೊರಟರು.

## ೮

ಶೇಷಗಿರಿಯಿಂದ ಪ್ರದೀಪನು ಅವಮಾನಿತನಾದ ಕೆಲವು ದಿನಗಳನಂತರ ಅಪರಾಧಿಯ ವಿಚಾರಣೆಯಾಯಿತು.

ವಿಚಾರಣೆಯ ದಿನ ಪತ್ತೇದಾರರು ಕೋರ್ಟಿಗೆ ಹಾಜರಾಗಿ ತಮ್ಮ ವಿವರಣೆಯನ್ನಿತ್ತರು.

ನ್ಯಾಯಾಧೀಶರು ಅಪರಾಧಿಗೆ ಆತನ ತಪ್ಪಿನ ಪ್ರತಿಫಲವಾಗಿ ಶಿಕ್ಷೆಯನ್ನು ವಿಧಿಸಲು ಶೇಷಗಿರಿಯು ಶ್ರೀಕೃಷ್ಣಜನ್ಮಸ್ಥಾನವನ್ನು ಸೇರಿದನು.

ಪತ್ತೇದಾರರು ವೇಷಾಂತರದಿಂದ ತನ್ನ ಹಿಂದೆಯೇ ಇರುವರೆಂಬ ಯೋಚನೆಯಿಂದ ಪ್ರದೀಪನು ಮುಂದಿನ ಕಾರ್ಯಕಲಾಪಗಳ ಬಗ್ಗೆ ಹೆಚ್ಚು ಜಾಗರೂಕನಾದನು.

ಕೆಲವು ದಿನಗಳು ಕಳೆಯಿತು.

ದಿನಗಳು ಕಳೆಯುತ್ತಾ ಹೋದಹಾಗೆ ಪ್ರದೀಪನು ಹೆಚ್ಚು, ಹೆಚ್ಚು ಜಾಗರೂಕನಾಗತೊಡಗಿದನು.

ಹೀಗಿರಲೊಂದು ದಿನ ಆತನ ಹೆಸರಿಗೆ ಪೋಸ್ಟ್ ಕವರು ಬಂದಿತು.

ಟಪಾಲು ಮುದ್ರೆಯನ್ನು ನೋಡುತ್ತಲೇ ತನ್ನ ಮಾವನು ಬರೆದಿರುವನೆಂದುಕೊಂಡು, ವಿಷಯವನ್ನರಿಯುವ ಕುತೂಹಲವುಳ್ಳವನಾಗಿ ಕವರನ್ನು ಹರಿದು ಒಳಗಡೆಯಿದ್ದ ಕಾಗದವನ್ನು ಬಿಚ್ಚಿನೋಡಲು ತನ್ನ ಮಾವನೇ ಬರೆದುದೆಂದು ಆ ಬರವಣಿಗೆಯಿಂದ ತಿಳಿಯಿತು. ಕಾಗದವನ್ನು ಓದಲು ಅದರಲ್ಲಿ ಈ ರೀತಿ ಬರೆದಿತ್ತು.

ಚಿ|| ಅಳಿಯರಾದ ಪ್ರದೀಪ್ ಕುಮಾರರಿಗೆ ಚಂಪಾಪುರದಲ್ಲಿರುವ ನಿಮ್ಮ ಮಾವನಾದ ತ್ರೀಕಂಠಯ್ಯನವರು ಮಾಡುವ ಆಶೀರ್ವಾದಗಳು .||ಸಾಂ||

ಇಲ್ಲಿ ನಾವೆಲ್ಲರೂ ಆರೋಗ್ಯದಲ್ಲಿರುವೆವು. ನಿಮ್ಮ ಕ್ಷೇಮದ ಬಗ್ಗೆ ಆಗಿಂದ್ದಾಗ್ಗೆ ಕಾಗದ ಬರೆಯುತ್ತಿರಬೇಕು. ಈ ಕಾಗದವನ್ನು ಬರೆದ ಕಾರಣ ವೇನೆಂದರೆ:—

ನಿಮ್ಮ ಸೌಭಾಗ್ಯವತಿಯಾದ ಪುಷ್ಪವೇಣಿಯು ತಾ...........ನೇ ಸೋಮ ವಾರ ಬೆಳಗಿನ ಝಾವ ಐದು ಘಂಟೆಯ ವೇಳೆಗೆ ಗಂಡು ಮಗುವಿಗೆ ಜನನ ವಿತ್ತಳು. ಕೂಸು-ಬಾಣಂತಿಯರು ಆರೋಗ್ಯವಾಗಿರುವರು. ಹನ್ನೊಂದನೆಯ ದಿನ ನಾಮಕರಣ ನಡೆಯಬೇಕಾಗಿದೆ. ನೀವು ಆಗ ಖಂಡಿತವಾಗಿ ಬರುವಿ ರೆಂದು ನಂಬಿರುವೆನು.

ಇನ್ನು ಹೆಚ್ಚಿನ ವಿಷಯ ಮೊಃಖ್ತ ಸೇರಿದಾಗ.

ಇಂತೀ ಆಶೀರ್ವಾದಗಳು
**'ಶ್ರೀಕಂಠಯ್ಯ'**

ಕಾಗದವನ್ನು ಓದಿ ನೋಡಿ ಪ್ರದೀಪನು ಪ್ರದೀಪನು ಆನಂದಪುಳಕಿತ ನಾದನು.

ಮಗುವಿನ ನಾಮಕರಣಕ್ಕೆ ಹೋಗಲೇಬೇಕೆಂದು ನಿರ್ಧರಮಾಡಿ ಕೊಂಡನು.

ಮಗನು ಹುಟ್ಟಿದ ಸಂತೋಷಕ್ಕಾಗಿ ತನ್ನ ಸ್ನೇಹಿತರಿಗೆಲ್ಲಾ ಸಂತೋಷ ಕೂಟವನ್ನಿಟ್ಟನು.

ನಾಮಕರಣಕ್ಕೆ ಹೋಗುವ ನಿಮಿತ್ತ ತನ್ನ ಮಾವನಿಗೆ ಕಾಗದ ಬರೆಯ ಬೇಕೆಂದುಕೊಂಡನು.

ತೀ|| ಮಾವನವರಿಗೆ ಜಗದೀಶಪುರದಲ್ಲಿರುವ ನಿಮ್ಮ ಅಳಿಯನಾದ ಪ್ರದೀಪ್‌ಕುಮಾರನು ಮಾಡುವ ಸಾಷ್ಟಾಂಗ ನಮಸ್ಕಾರಗಳು. ||ಸಾಂ||

ಇಲ್ಲಿ ನಾನು ಕ್ಷೇಮದಲ್ಲಿರುವೆನು. ನಿಮ್ಮೆಲ್ಲರ ಕ್ಷೇಮಸಮಾಚಾರ ವನ್ನು ಆಗಿಂದಾಗ್ಗೆ ತಿಳಿಸುತ್ತಾ ನನ್ನ ಮನಸ್ಸಂತೋಷಪಡಿಸಬೇಕು. ಈ ಪತ್ರ ಬರೆದ ಕಾರಣವೇನೆಂದರೆ—ನೀವು ಬರೆದ ಕಾಗದವು ಬಂದು ತಲುಪಿ ವಿಷಯವೆಲ್ಲಾ ತಿಳಿದು ಬಹಳ ಸಂತೋಷವಾಯಿತು. ನಾನು ಹನ್ನೊಂದ ನೆಯ ದಿನ ನಾಮಕರಣ ಮಹೋತ್ಸವಕ್ಕೆ ಖಂಡಿತಾ ಬರುವೆನು.

ಬುಧವಾರ ಬೆಳಿಗ್ಗೆ ನಾನು ಇಲ್ಲಿಂದ ಹೊರಡುವೆನು. ರೈಲು ರಾತ್ರಿ ಹತ್ತು ತಪ್ಪಿದರೆ ಹನ್ನೊಂದು ಘಂಟೆಯ ವೇಳೆಗೆ ರಾಜೇಂದ್ರಪುರಕ್ಕೆ ಬರುತ್ತದೆ. ನೀವು ಆ ವೇಳೆಗೆ ಗಾಡಿಯನ್ನು ಕಳುಹಿಸಬೇಕಾಗಿ ಬೇಡುತ್ತೇನೆ. ಇತರ ವಿಚಾರ ಮೊಃಖ್ತಾ.

ಇಂತೀ ಸಾಸ್ಟಾಂಗ ನಮುಸ್ಕಾರಗಳು.

ಇತಿ,

**'ಪ್ರದೀಪ್ ಕುಮಾರ್'**

ಇನ್ಸ್ಪೆಕ್ಟರ್,

(ಜಗದೀಶಪುರ)

ಕಾಗದವನ್ನು ಬರೆದ ಪ್ರದೀಪನು ಇನ್ನೊಂದು ಸಾರಿ ಕಾಗದವನ್ನು ಓದಿ ನೋಡಿದನು.

ಬಳಿಕ ಕಾಗದವನ್ನು ಮಡಿಸಿ ಕವರಿನಲ್ಲಿಟ್ಟು, ಕವರಿನ ಮೇಲೆ ವಿಳಾಸ ವನ್ನು ಬರೆದು ಹೊರಗೆ ಬಂದನು.

ಟಪಾಲು ಕಛೇರಿಯು ದೂರದಲ್ಲಿದ್ದುದರಿಂದ ಅಷ್ಟು ದೂರ ಹೋಗಲು ಬೇಸರಗೊಂಡು, ಯಾರಸಂಗಡವಾದರೂ ಕಳುಹಿಸಬೇಕೆಂದು ಯೋಚಿಸಿ, ತನ್ನ ಪರಿಚಿತರಾರಾದರೂ ಬರುತ್ತಿರುವರೇ ಹೇಗೆಂದು ಸುತ್ತಮುತ್ತಲೂ ನೋಡು ತ್ತಿರಲು, ಸಮೀಪದಲ್ಲಿಯೇ ಬಳೇ ಅಂಗಡಿ ಬಾಳಪ್ಪನ ಜವಾನನು ಕಾರ್ಡು ಗಳನ್ನೂ, ಕವರುಗಳನ್ನೂ ತೆಗೆದುಕೊಂಡು ಟಪಾಲ್ ಕಛೇರಿಯ ಕಡೆ ಹೋಗು ತ್ತಿರುವುದನ್ನು ಕಂಡನು.

ಬಾಳಪ್ಪನು ಪ್ರದೀಪನ ಆಪ್ತ ಮಿತ್ರನು. ನಾಲ್ಕಾರು ದಿನಗಳಿಗೊಂದು ಸಾರಿ ಒಬ್ಬರನ್ನೊಬ್ಬರು ಸಂಧಿಸುತ್ತಿದ್ದರು.

ಪ್ರದೀಪನು ಏರ್ಪಡಿಸಿದ್ದ ಸಂತೋಷಕೂಟಕ್ಕೆ ಬಾಳಪ್ಪನೂ ಬಂದಿ ದ್ದನು.

ಪ್ರದೀಪನು ಬಾಳಪ್ಪನ ಜವಾನನನ್ನು ಕೂಗಿ ತನ್ನ ಕೈಯಲ್ಲಿದ್ದ ಕವ ರನ್ನು ಆತನಿಗೆ ಕೊಟ್ಟು, ಅದನ್ನು ಟಪಾಲ್ ಪೆಟ್ಟಿಗೆಗೆ ಹಾಕುವಂತೆ ಹೇಳಿ ಪೋಲೀಸ್ ಠಾಣೆಗೆ ಹೊರಟನು.

ಮಗು ಹುಟ್ಟಿದ ಆನಂದದಲ್ಲಿ ಅವನ ಸಂತೋಷಕ್ಕೆ ಮೇರೆಯೇ ಇಲ್ಲ ವಾಯಿತು.

ವಿವಾಹವಾದ ಬಹುದಿನಗಳನಂತರ ಮಗನು ಹುಟ್ಟಿದ್ದ ಪ್ರಯುಕ್ತ ಯಾಮಿಕರಿಗೆಲ್ಲಾ ಬಹುಮಾನವನ್ನಿತ್ತನು.

ಎಂದಿಗೆ ಬುಧವಾರವು ಬರುವುದು? ಎಂದಿಗೆ ಚಂಪಾಪುರಕ್ಕೆ ಹೋಗು ವೆನು? ಎಂದಿಗೆ ಮಗನ ಮುಖವನ್ನು ನೋಡಿ ಆನಂದಪಡುವೆನು? ಎಂದು ಹಾರೈಸುತ್ತಿದ್ದನು.

ಮಗನು ಹುಟ್ಟಿದ ಸಂತೋಷವೈಭವದಲ್ಲಿ ಪತ್ತೇದಾರರನ್ನು ಮರೆಯಲಿಲ್ಲ. ತನಗೆ ಮೋಸಪಡಿಸಲು ಯಾವ ಸಮಯದಲ್ಲಿ ಯಾವ ವೇಷದಲ್ಲಿ ಬಂದರೂ ಅವರ ಗುರುತನ್ನು ಹಿಡಿದು, ಅವಮಾನಪಡಿಸದೆ ಬಿಡಬಾರದೆಂದುಕೊಂಡು ಆ ವಿಷಯದಲ್ಲಿ ಮಾತ್ರ ವಿಶೇಷ ಜಾಗರೂಕನಾಗಿಯೇ ಇದ್ದನು.

ಪತ್ತೇದಾರರು ವೇಷಾಂತರದಿಂದ ಈ ಊರಿಗೆ ಬಂದಿರಬಹುದೆಂಬ ಅನು ಮಾನದಿಂದ ಅವರನ್ನು ಪತ್ತೇಮಾಡಿ ಹಿಡಿಯಲು, ಪ್ರದೀಪನೂ ಹಲವು ವೇಷ ಗಳನ್ನು ಧರಿಸಿಕೊಂಡು, ಊರನ್ನೆಲ್ಲಾ ಸುತ್ತಿ ನೋಡಿದನು. ಅದರಿಂದ ಪ್ರಯೋಜನವೇನೂ ಆಗಲಿಲ್ಲ. ಶ್ರಮವಹಿಸಿದಷ್ಟೂ ಬೆಟ್ಟಕ್ಕೆ ಕಲ್ಲನ್ನು ಹೊತ್ತಂತಾಯಿತು.

ತನಗೆ ಅನುಮಾನ ಬಂದ ಕಡೆಗಳಿಗೆಲ್ಲಾ ಹೋಗಿ ನೋಡಿದನು. ಸಂದೇ ಹದ ಛಾಯೆಗೆ ಸಿಕ್ಕ ಮನುಷ್ಯರನ್ನು ಹಿಂಬಾಲಿಸಿ ಅವರಿಗರಿವಾಗದಂತೆ ಅವರ ನಡವಳಿಕೆಗಳನ್ನೆಲ್ಲಾ ಪರಿಶೀಲಿಸಿ ನೋಡಿದನು. ಅದರಿಂದಲೂ ಪ್ರಯೋಜನ ವಾಗಲಿಲ್ಲ. ಎಷ್ಟು ವಿಧದಲ್ಲಿ ಪ್ರಯತ್ನಪಟ್ಟು ಪರಿಶೀಲಿಸಿ ನೋಡಿದರೂ ಫಲ ಕಾರಿಯಾಗದೆ ಪಟ್ಟ ಪರಿಶ್ರಮವೆಲ್ಲಾ ಸಮುದ್ರಕ್ಕೆ ನೀರನ್ನು ಹೊತ್ತಂತಾ ಯಿತು.

ಪತ್ತೇದಾರರು ಈ ಊರಿನಲ್ಲಿ ಇರುವರೇ, ಇಲ್ಲವೇ? ಎಂಬ ಅನು ಮಾನವುಂಟಾಯಿತು.

'ಹಿಂದೆ ಸದಾ ನನ್ನ ಬೆನ್ನಹಿಂದೆಯೇ ಇದ್ದು, ನನಗೆ ಅವಮಾನ ಮಾಡಿದ ಶೇಷಗಿರಿಯನ್ನು ಹಿಡಿದರು, ಈ ಸಾರಿ ಅದರಂತೆಯೇ ನನ್ನ ಹಿಂದಿರ ಲಾರರು. ಪ್ರದೀಪನು ಎಚ್ಚರಗೊಳ್ಳುವನೆಂಬ ಭಾವನೆಯ ಮೇಲೆ ಬೇರೊಂದು

ಪ್ರಯತ್ನದಲ್ಲಿರಬಹುದು. ಆಗಲಿ! ಅವರು ಯಾವ ಪ್ರಯತ್ನದಲ್ಲಿಯಾದರೂ ಇರಲಿ. ಅವರು ವೇಷಾಂತರದಿಂದ ನನ್ನಲ್ಲಿಗೆ ಬಂದಾಗ ಅವರನ್ನು ಹಿಡಿಯದೆ ಬಿಡಲಾರೆನು.'

ಎಂಬುದಾಗಿ ಯೋಚಿಸಿಕೊಂಡು ಆ ವಿಷಯದಲ್ಲಿ ವಿಶೇಷ ಎಚ್ಚರಿಕೆಯಿಂದಲೇ ಇದ್ದನು.

ಪತ್ತೇದಾರರ ವಿಷಯದಲ್ಲಿ ಎಚ್ಚರಿಕೆಯಿಂದಿದ್ದರೂ, ಮಗನು ಹುಟ್ಟಿದ ಸಂತೋಷವನ್ನು ಮರೆಯಲಿಲ್ಲ.

ನಾಮಕರಣ ಮಾಡಲು ಇನ್ನು ನಾಲ್ಕು ದಿನಗಳು ಉಳಿಯಿತು. ಪ್ರದೀಪನ ಸಂತೋಷವನ್ನು ಹೇಳತೀರದು.

ಮಾವನ ಊರಿಗೆ ಹೊರಡಲು ಆಗಿನಿಂದಲೇ ಬೇಕಾದ ಸಿದ್ಧತೆಯನ್ನು ಮಾಡಿಕೊಂಡನು.

ಶೇಷಗಿರಿಯು ಬಟ್ಟೆಗಳೆಲ್ಲವನ್ನೂ ಹರಿದುಹಾಕಿದ್ದ ಪ್ರಯುಕ್ತ ಬೇರೆ ಬಟ್ಟೆಗಳನ್ನು ಹೊಲೆಸಿಕೊಂಡನು.

ಶೇಷಗಿರಿಯ ವಿಚಾರಣೆಯಯಗಿ, ಆತನು ಶಿಕ್ಷೆಗೆ ಗುರಿಯಾದನಂತರ, ಅವನು ಕದ್ದಿದ್ದ ದ್ರವ್ಯವೆಲ್ಲವೂ ಸಿಕ್ಕಿದ್ದ ಪ್ರಯುಕ್ತ ಹಣಕ್ಕೇನೂ ಕೊರತೆಯಿರಲಿಲ್ಲ.

ತನ್ನ ಪತ್ನಿಗೆ ನಾಲ್ಕಾರು ಸೀರೆಗಳನ್ನು ಕೊಂಡನು. ಮಗನಿಗೆ ಬಟ್ಟೆಗಳನ್ನು ಹೊಲೆಸಿದನು.

ಮಗನು ಹುಟ್ಟಿದನೆಂಬ ಸಂತೋಷದ ಆವೇಷದಲ್ಲಿ ಹಣದ ಕಡೆ ಲಕ್ಷ್ಯವೇ ಕೊಡಲಿಲ್ಲ.

ಹೊರಡುವ ದಿನವೂ ಸಮೀಪಿಸಿತು. ಮಾವನ ಮನೆಗೆ ಕೊಂಡೊಯ್ಯಲು ದೊಡ್ಡ ಬುಟ್ಟಿಯ ತುಂಬಾ ಬಗೆಬಗೆಯ ಸಿಹಿತಿಂಡಿಗಳನ್ನು ತೆಗೆದುಕೊಂಡನು. ಸುವಾಸನೆಯ ತಿಂಡಿಗಳನ್ನು ಕಟ್ಟಿಸಿಕೊಂಡನು.

ಮಂಗಳವಾರ ರಾತ್ರಿಯೆಲ್ಲಾ ಆತನಿಗೆ ನಿದ್ರೆಯೆಂಬುದೇ ಇಲ್ಲ. ರಾತ್ರಿಯೆಲ್ಲಾ ನಾನಾವಿಧವಾದ ಯೋಚನೆಗಳನ್ನು ಮಾಡುತ್ತಾ ಆ ರಾತ್ರಿಯನ್ನು ಕಳೆದನು.

ಮಾರನೆಯ ದಿನ ಬೆಳಗಾಗುತ್ತಲೇ ಹೊರಡಲು ತಯಾರಾದನು. ರಾತ್ರಿಯೇ ಯಾಮಿಕರಿಬ್ಬರಿಗೆ ಹೇಳಿದ್ದ ಪ್ರಯುಕ್ತ ಅವರಿಬ್ಬರೂ ಬೆಳಗಾಗುವ ವೇಳೆಗೆ ತಯಾರಾಗಿ ಬಂದಿದ್ದರು.

ಹೊರಗಡೆ ಜಟಕಾ ಗಾಡಿಯೂ ಸಿದ್ಧವಾಗಿ ನಿಂತಿತ್ತು.

ಯಾಮಿಕರು ಸಾಮಾನುಗಳನ್ನು ಗಾಡಿಗೆ ತುಂಬಿದರು.

ಪ್ರದೀಪನು ಮನೆಗೆ ಬೀಗ ಹಾಕಿ ಮನೆಯಕಡೆ ಎಚ್ಚರಿಕೆಯಿಂದ ನೋಡಿ ಕೊಳ್ಳುವಂತೆ ಹೇಳಿ ಗಾಡಿಯಲ್ಲಿ ಕುಳಿತನು.

ಹಿಂದುಗಡೆ ಯಾಮಿಕರಿಬ್ಬರೂ ಕುಳಿತರು.

ಮೂವರೂ ಗಾಡಿಯಲ್ಲಿ ಕುಳಿತುಕೊಳ್ಳುತ್ತಲೇ ಜಟಕಾ ಸಾಬಿಯು ಗಾಡಿಯನ್ನೇರಿ 'ಚಲ್‌ಬೇಟಾ' ಎಂದು ಕುದುರೆಯ ಬೆನ್ನಿನ ಮೇಲೆ ತನ್ನ ಹಸ್ತದಿಂದ ಹೊಡೆಯುತ್ತಲೇ ಒಡೆಯನ ಸೂಕ್ಷ್ಮವನ್ನರಿತ ಕುದುರೆಯು ರೈಲ್ವೇ ನಿಲ್ದಾಣದ ಮಾರ್ಗವನ್ನಿಡಿದು ಹೊರಟಿತು.

ಪ್ರದೀಪನ ಮನೆಯಿಂದ ರೈಲ್ವೇ ನಿಲ್ದಾಣಕ್ಕೆ ಎರಡು ಫರ್ಲಾಂಗುಗಳ ದೂರವಿದ್ದುದರಿಂದ ಕಾಲುಘಂಟೆಯೊಳಗಾಗಿ ಗಾಡಿಯು ರೈಲ್ವೇ ನಿಲ್ದಾಣದ ಹತ್ತಿರ ನಿಂತಿತು.

ಯಾಮಿಕರು ಗಾಡಿಯಿಂದ ಸಾಮಾನುಗಳನ್ನು ಕೆಳಗಿಳಿಸಿಕೊಂಡರು.

ಪ್ರದೀಪನು ಗಾಡಿಯವನಿಗೆ ಬಾಡಿಗೆ ಹಣವನ್ನಿತ್ತು, ರಾಜೇಂದ್ರಪುರಕ್ಕೆ ಇಂಟರ್‌ಕ್ಲಾಸಿನ ಟಿಕೇಟನ್ನು ಪಡೆದನು.

ಯಾಮಿಕರು ಸಾಮಾನುಗಳನ್ನು ಬೋಗಿಯಲ್ಲಿಟ್ಟು, ಪ್ರದೀಪನ ಅಪ್ಪಣೆ ಯನ್ನು ಪಡೆದು ಹಿಂದಿರುಗಿದರು.

ನಿಯಮಿತ ವೇಳೆಗೆ ರೈಲು ನಿಲ್ದಾಣದಿಂದ ಕದಲಿತು.

ಮಾವನ ಮನೆಯಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದರ ಬಗ್ಗೆ ಪ್ರದೀಪ ನಿಗೆ ಆಗಲೇ ಯೋಚನೆಗೆ ಪ್ರಾರಂಭವಾಯಿತು.

ಮಾವನು ಜಮೀನ್ದಾರ. ಅಳಿಯನು ಇನ್‌ಸ್ಪೆಕ್ಟರ್

ಸುಖ, ದುಃಖ, ಮಳೆ, ಗಾಳಿ, ಬಿಸಿಲುಗಳ ಪರಿವೆಯಿಲ್ಲದ ರೈಲು ಒಂದೇ ಸಮನಾಗಿ ಓಡುತ್ತಿತ್ತು.

ರೈಲು ಎಷ್ಟು ವೇಗವಾಗಿ ಹೋಗುತ್ತಿದ್ದರೂ, ಪ್ರದೀಪನಿಗೆ ಮಾತ್ರ ನಿಧಾನವಾಗಿ ಹೋಗುತ್ತಿರುವಂತೆ ಭಾಸವಾಗುತ್ತಿತ್ತು.

ರಾತ್ರಿ ಹನ್ನೊಂದು ಘಂಟೆಯ ವೇಳೆಗೆ ಮಾವನ ಮನೆಯಲ್ಲಿರುವೆನೆಂದೂ, ಪತ್ನೀಪುತ್ರರನ್ನು ನೋಡಿ ಸಂತೋಷಪಡುವೆನೆಂದೂ, ಇನ್ನೂ ಹಲವು ಬಗೆಯಲ್ಲಿ ಯೋಚಿಸುತ್ತಾ ಪ್ರದೀಪನು ತನ್ನ ಮನದಲ್ಲಿಯೇ ಗಾಳಿಗೋಪುರಗಳನ್ನು ಕಟ್ಟುತ್ತಿದ್ದನು.

ಆ ಬೋಗಿಯಲ್ಲಿ ಸುಮಾರು ಆರೇಳು ಜನರು ಮಾತ್ರ ಕುಳಿತಿದ್ದರು. ಅವರಾರ ಪರಿಚಯವೂ ಪ್ರದೀಪನಿಗಿರಲಿಲ್ಲ. ಅವರ ಪರಿಚಯ ಮಾಡಿಕೊಳ್ಳಲೂ ಅವನು ಇಷ್ಟಪಡಲಿಲ್ಲ.

ಅವರೆಲ್ಲರೂ ಒಬ್ಬರೊಡನೊಬ್ಬರು ವಿನೋದವಾಗಿ ಮಾತನಾಡುತ್ತಾ ಸರಸವಾಡುತ್ತಿದ್ದರು.

ಪ್ರದೀಪನಿಗೆ ಅವರ ವಿನೋದಕೂಟಗಳೇನೂ ಬೇಕಾಗಿರಲಿಲ್ಲ. ಕೈಯಲ್ಲಿ ಪತ್ರಿಕೆಯನ್ನು ಹಿಡಿದುಕೊಂಡು ಓದುತ್ತಿದ್ದನು. ಆದರೇ, ಕಣ್ಣುಗಳು ಪತ್ರಿಕೆಯ ಮೇಲಿದ್ದರೂ ಗಮನವು ಅದರ ಮೇಲಿರಲಿಲ್ಲ. ಹೆಸರಿಗೆ ಮಾತ್ರ ಕೈಯಲ್ಲಿ ಪತ್ರಿಕೆಯಿತ್ತು.

ರೈಲು ಅರ್ಧದಾರಿಗೆ ಹೋದನಂತರ ರಾಮನಪುರವೆಂಬ ನಿಲ್ದಾಣದ ಸಮೀಪದಲ್ಲಿ ಇಂಜಿನ್ ಕೆಟ್ಟುಹೋಯಿತು.

ಇಂಜಿನ್ನಿನ ಮುಖ್ಯ ಉಪಕರಣಗಳೇ ಹಾಳಾಗಿಹೋದ ಪ್ರಯುಕ್ತ ಅದು ಅಲ್ಲಿಯೇ ರಿಪೇರಿಯಾಗಿ ಮುಂದೆ ಹೋಗುವ ಸ್ಥಿತಿಯಲ್ಲಿರಲಿಲ್ಲ.

ರಾಮನಪುರಕ್ಕೆ 86 ಮೈಲಿಗಳ ದೂರದಲ್ಲಿದ್ದ ರಾಜನಗರದಿಂದ ಬೇರೆ ಇಂಜಿನ್ ಬರಬೇಕಾಯಿತು.

ಆದುದರಿಂದ ರೈಲು ಹೊರಡಲು ಸಾಧ್ಯವಾಗದೆ ಅಲ್ಲಿಯೇ ನಿಲ್ಲಬೇಕಾಯಿತು.

ವಿಷಯವನ್ನರಿತ ಪ್ರಯಾಣಿಕರು ರೈಲ್ವೇ ಅಧಿಕಾರಿಗಳನ್ನು ತಮ್ಮ ತಮ್ಮ ಮನಸ್ಸಿಗೆ ಬಂದಹಾಗೆ ನಿಂದಿಸಿದರು.

ಪ್ರದೀಪನ ಮನಸ್ಸಿನ ಹೃದ್ವೇಗವನ್ನು ಹೇಳತೀರದು. ತಾನು ಹೊರಟ ಘಳಿಗೆಯು ಸರಿಯಾಗಿಲ್ಲವೆಂದುಕೊಂಡನು.

ರಾಜನಗರದಿಂದ ಬೇರೆ ಇಂಜಿ಼ ಬರುವವರೆವಿಗೂ ಪ್ರಯಾಣಿಕರು ಅಲ್ಲಿಯೇ ವಸತಿ ಮಾಡಬೇಕಾಯಿತು.

ತನ್ನ ಮಾವನವರು ಆಳಿನ ಸಂಗಡ ಗಾಡಿಯನ್ನು ಕಳುಹಿಸಿರುವರು. ಆತನು ರೈಲು ತಡವಾಗಿ ಬರುವುದೆಂದು ತಿಳಿದು ಅಲ್ಲಿಯೇ ತನಗಾಗಿ ಕಾಯುತ್ತಿರುತ್ತಾನೆ. ಎಂಬುದಾಗಿ ಪ್ರದೀಪನು ಊಹಿಸಿಕೊಂಡನಲ್ಲದೆ, ಒಟ್ಟಿನಲ್ಲಿ ಈ ದಿನ ರಾತ್ರಿ ಮಗನ ಮುಖವನ್ನು ನೋಡುವ ಲಭ್ಯವಿರುವುದೋ ಇಲ್ಲವೋ ಎಂದುಕೊಂಡು ಕಳವಳಕ್ಕೀಡಾದನು.

ರಾಮನಪುರದಿಂದ ರಾಜನಗರಕ್ಕೆ ವರ್ತಮಾನ ಹೋಗಿದ್ದರೂ, ಅಲ್ಲಿಂದ ಇಂಜಿ಼ ಬರಲು ಸ್ವಲ್ಪ ತಡವೇ ಆಯಿತು.

ನೂರಾರು ಕಾರ್ಯಗಳಿಗಾಗಿ ಹೊರಟಿದ್ದ ಪ್ರಯಾಣಿಕರೆಲ್ಲರಿಗೂ ಅದರಿಂದ ವಿಶೇಷ ತೊಂದರೆಯಾಯಿತು.

ರಾತ್ರಿ ಹನ್ನೊಂದು ಘಂಟೆಗೆ ರಾಜೇಂದ್ರಪುರವನ್ನು ತಲುಪಬೇಕಾಗಿದ್ದ ರೈಲು ಮಾರನೆಯ ದಿನ ಮಧ್ಯಾಹ್ನ ಮೂರು ಘಂಟೆಗೆ ತಲುಪಿತು.

೬

ರೈಲು ರಾಜೇಂದ್ರಪುರದ ನಿಲ್ದಾಣದಲ್ಲಿ ನಿಲ್ಲುತ್ತಲೇ ಪ್ರದೀಪನು ಬೋಗಿಯಿಂದಿಳಿದು ತನ್ನ ಸಾಮಾನುಗಳನ್ನು ಕೆಳಗಿಳಿಸಿಕೊಂಡನು.

ತನ್ನ ಮಾವನು ಗಾಡಿಯನ್ನು ಕಳುಹಿಸಿರುವನು. ಗಾಡಿಯವನು ತನಗಾಗಿ ಕಾಯುತ್ತಿರಬಹುದು, ಎಂದು ಭಾವಿಸಿ ಸುತ್ತಮುತ್ತಲೂ ನೋಡುತ್ತಿರಲು, ಸುಮಾರು ನಲವತ್ತೈದು ವರ್ಷದ ಮುದುಕನು ಆತನ ಬಳಿಗೆ ಬಂದನು.

ಆ ಮುದುಕನ ಮೈಮೇಲಿದ್ದ ಬಟ್ಟೆಗಳನ್ನು ಒಗೆದು ಎಷ್ಟು ದಿನಗಳಾಗಿತ್ತೋ ದೇವರೇ ಬಲ್ಲ. ತಲೆಯು ಎಣ್ಣೆಯನ್ನು ಕಂಡು ಒಂದೆರಡು ತಿಂಗಳಾದರೂ ಆಗಿರಬಹುದೆಂಬಂತೆ ಕಾಣುತ್ತಿತ್ತು. ಗಡ್ಡವನ್ನೂ ತೆಗೆಸಿರಲಿಲ್ಲ. ಸ್ನಾನಮಾಡಿ ಬಹುದಿನಗಳಾಗಿರುವಂತೆ ತೋರುತ್ತಿದ್ದನು.

ಅವನನ್ನು ನೋಡಿ ಪ್ರದೀಪನಿಗೆ ಅಸಹ್ಯವುಂಟಾಯಿತು. ಈತನಾರೋ ಬಿಕ್ಷುಕನಿರಬಹುದೆಂದುಕೊಂಡನು.

ಮುದುಕನು ಪ್ರದೀಪನಿಗೆ ಸಲಾಂ ಮಾಡಿ, ವಿನಯದಿಂದಲೇ—

"ಸಾಮಿ! ಜಗದೀಶ್‌ಪುರ್ದ ಇನ್ಸ್‌ಪೆಟ್ರು ನೀವೇನಾ?" ಎಂದು ಕೇಳಿದನು.

"ಹೌದು! ಏಕೆ? ನೀನಾರು?"

"ಅಯ್ಯೋ! ನನ್ನೊಡ್ಯಾ! ನೆನ್ನೆಯಿಂದ ನಿಮ್ಗಾಗಿ ಕಾಯ್ತ ಇದ್ನಲ್ಲ. ಬನ್ನಿ ಹೋಗನ."

"ಎಲ್ಲಿಗೆ?"

"ಇದೇನಿಂಕೇಳ್ತೀರಾ ? ನಮ್ದಣೀರು ಕಳ್ಸವ್ರೆ. ನಿಮ್ಮುನ್ ಕರ್ಕಂ ಬರಾಕೆ."

"ಯಾರು ನಿನ್ನ ಧಣಿ ?"

"ಇದೇನ್ ಸಾಮಿ ಇಂಕೇಳ್ತೀರಾ ? ಶ್ರೀಕಂಠಪ್ನೋರಾಳಲ್ವೇ ನಾನು. ನಿಮ್ಮದ್ವೇಗೆ ನಂಗ್ನೋಡಿದ್ದೀರಾ. ಮಾತಾಡ್ಸಿದ್ದೀರಾ. ಈಗ್ನೋಡುದ್ರೆ ಗುರ್ತಿಲ್ದಂಗೆ ಕೇಳ್ತೀರಲ್ಲ."

ತನ್ನ ಮಾವನು ಗಾಡಿಯನ್ನು ಕಳುಹಿಸಿರುವನೆಂದೂ, ಈತನು ನೆನ್ನೆ ರಾತ್ರಿಯಿಂದ ತನಗಾಗಿ ಕಾಯುತ್ತಿರುವನೆಂದೂ ಪ್ರದೀಪನು ಊಹಿಸಿಕೊಂಡನು.

"ನಿನ್ನ ಹೆಸರೇನು ?"

—ಎಂದು ಪ್ರದೀಪನು ಕೇಳಲು, ಮುದುಕನು—

"ಇದೇನ್ಬುದ್ದಿ, ಇಂಕೇಳ್ತೀರಾ ? ನನ್ನೆಸ್ರು ಕೆಂಚ ಬುದ್ದಿ" ಎಂದು ಹೇಳಿದನು.

"ಸರಿ ! ನೀನು ನೆನ್ನೆ ರಾತ್ರಿಯಿಂದಲೂ ಕಾಯುತ್ತಿರುವೆಯಾ ?"

"ಹೌದುಕಣ್ಬುದ್ದಿ. ಧಣಿಗಳೇಳವ್ರೆ. ನಿಮ್ಮುನ್ ಕರ್ಕಂಡೇ ಬರ್ಬೇಕು, ಅಂತ. ಅದ್ಕೆ ಕಾಯ್ಕಂಡಿವ್ನಿ."

"ರೈಲು ತಡವಾಗಿ ಬರುವುದೆಂದು ಅವರಿಗೆ ತಿಳಿಯದೇ ?"

"ರಾತ್ರಿ ನಾನೋಗ್ದೆ ಇದ್ದಿದ್ದಿಕ್ಕೆ ಬೆಳಿಗ್ಗೆ ಬೇರೆ ಆಳುನ್ನ ಕಳ್ಸಿದ್ರು ಬುದ್ದಿ. ಅವುನ್‌ಸಂಗ್ಡ ಹೇಳ್‌ಕಳ್ಸಿವ್ನಿ."

"ಸರಿ, ಸರಿ ! ಗಾಡಿಯೆಲ್ಲಿದೆ ?"

"ಹೊರ್ಗಡೆ ಐತೆ ಬುದ್ದಿ. ಈಗ ಉರಿಉರಿ ಬಿಸ್ಲು ಬುದ್ದಿ. ನೀವೂ ದಣ್ದು ಬಂದಿದ್ದೀರಾ. ಈ ವೇಟಿಂಗ್ ರೂಮ್ನಲ್ಲಿ ಒಂದ್ಗಂಟೆ ಸುಧಾರ್ಸ್ಕೊಳ್ಳಿ. ತಂಪೊತ್ನಗೆ ಗಾಡಿ ಕಟ್‌ತಿವ್ನಿ."

"ಹಾಗೇ ಮಾಡು."

ಕೆಂಚನು ಪ್ರದೀಪನ ಸಾಮಾನುಗಳೆಲ್ಲವನ್ನೂ ವಿಶ್ರಾಂತಿ ಮಂದಿರಕ್ಕೆ ಸಾಗಿಸಿದನು.

ಪ್ರದೀಪನು ರೂಮಿನಲ್ಲಿ ಕುಳಿತುಕೊಂಡು ಸಿಗರೇಟನ್ನು ಸೇದುತ್ತಾ, ತನ್ನ ಮಾವನ ಮನೆಯವರ ವಿಷಯವನ್ನು ಕೆಂಚನೊಡನೆ ಕೇಳಿ ತಿಳಿದು ಕೊಂಡನು.

ತನ್ನ ಪತ್ನಿ, ಮಗನ ವಿಷಯವನ್ನು ಕೇಳದಿರಲಿಲ್ಲ. ಕೆಂಚನು ಅವನ ಪ್ರತಿ ಪ್ರಶ್ನೆಗೂ ಸಮರ್ಪಕವಾದ ಉತ್ತರವನ್ನು ಕೊಡುತ್ತಿದ್ದನು.

ಎಂದಿಗೆ ಚಂಪಾಪುರಕ್ಕೆ ಹೋಗುವೆನು ? ಎಂದು ಪ್ರದೀಪನು ಆತುರ ಗೊಂಡಿದ್ದನಾದರೂ, ಕೆಂಚನ ಮಾತಿನ ಮೇಲೆ ಒಂದು ಘಂಟೆ ಉಳಿಯ ಬೇಕಾಯಿತು.

ಯಾವುಯಾವುದೋ ವಿಷಯವನ್ನು ಮಾತನಾಡುತ್ತಾ ಒಂದು ಘಂಟೆ ಯನ್ನು ಕಳೆದುದಾಯಿತು.

ಪ್ರದೀಪನಿಗೆ ಹೊಟ್ಟೆ ಹಸಿಯುತ್ತಿದ್ದ ಪ್ರಯುಕ್ತ ನಿಲ್ದಾಣದಲ್ಲಿದ್ದ ಹೋಟೆಲಿನಲ್ಲಿಯೇ ಉದರಪೋಷಣೆಯನ್ನು ನೋಡಿಕೊಂಡನು.

ಬಳಿಕ ಕೆಂಚನು ಸಾಮಾನುಗಳೆಲ್ಲವನ್ನೂ ಗಾಡಿಯಲ್ಲಿಟ್ಟು, ಗಾಡಿಗೆ ಎತ್ತನ್ನು ಕಟ್ಟಿದನು.

ಪ್ರದೀಪನು ಇನ್ನು ಒಂದೆರಡು ಘಂಟೆಗಳಲ್ಲಿಯೇ ಮಗನನ್ನು ನೋಡುವೆ ನೆಂಬ ಉತ್ಸಾಹದಿಂದ ಗಾಡಿಯಲ್ಲಿ ಕುಳಿತನು.

ಕೆಂಚನು ಎತ್ತಿನ ಬೆನ್ನಮೇಲೆ ಹೊಡೆದು ಅದರ ಬಾಲವನ್ನು ತಿರುವು ತ್ತಲೇ ಎತ್ತು ಚಂಪಾಪುರದ ಮಾರ್ಗವನ್ನಿಡಿದು ಹೊರಟಿತು.

ರಾಜೇಂದ್ರಪುರದ ರೈಲ್ವೇ ನಿಲ್ದಾಣದಿಂದ ಚಂಪಾಪುರದವರೆವಿಗೆ ಪೂರಾ ಕಾಡುರಸ್ತೆಯೆ. ಆ ಹತ್ತು ಮೈಲಿಗಳ ಪಾಸಲೆಯಲ್ಲಿ ಒಂದು ಚಿಕ್ಕ ಹಳ್ಳಿಯೂ ಇರಲಿಲ್ಲ. ಗಾಡಿಯ ರಸ್ತೆಯೊಂದನ್ನು ಬಿಟ್ಟರೆ ಬಾಕಿ ಎಲ್ಲಾ ಅರಣ್ಯವೇ.

ಕೆಲವು ಕಡೆ ಗಗನಚುಂಬಿತ ವೃಕ್ಷಗಳು ಬೆಳೆದಿದ್ದರೆ, ಮತ್ತೆ ಕೆಲವು ಕಡೆ ಮೈದಾನ ಪ್ರದೇಶವಿತ್ತು.

ಪ್ರದೀಪನು ಹೊತ್ತು ಕಳೆಯುವ ನಿಮಿತ್ತ—

"ಕೆಂಚಾ ನಿನಗೆ ಬೇರೆ ಬಟ್ಟೆಗಳಿಲ್ಲವೇ ?" ಎಂದು ಕೇಳಿದನು.

ಕೆಂಚನು ವಿನಯದಿಂದಲೇ—

"ಐತೆ ಬುದ್ದಿ. ಒಗೀಬೇಕು" ಎಂದನು.

"ನೀನೂ ಬಟ್ಟೆಗಳನ್ನು ಒಗೆದುಕೊಳ್ಳುವೆಯಾ ?"

"ಇದೇನ್ಬುದ್ಧಿ ಇಂಕೇಳ್ತೀರಾ ? ಒಗೀದೇ ಯಾರಾನ ಉಟ್ಕೊಳ್ತಾರ ? ಒಗೀತೀನಿ ಬುದ್ಧಿ."

"ಎಷ್ಟು ತಿಂಗಳಿಗೊಂದು ಸಾರಿ ಬಟ್ಟೆಗಳನ್ನು ಬದಲಾಯಿಸುವೆ ?"

"ಹದ್ನೈದಿನಕ್ಕೊಂದಪ ಬದ್ಲಾಯಿಸ್ತೀನಿ ಬುದ್ಧಿ. ತಿಂಗ್ಳೆಲ್ಲಿಂದ ಬಂತು."

"ಇದಕ್ಕಿಂತಲೂ ಒಳ್ಳೆಯ ಬಟ್ಟೆಗಳಿರುವುದೇ ?"

"ಇಲ್ಲಾ ಬುದ್ಧಿ."

"ತಿಂಗಳಿಗೆ ಒಂದು ಸಾರಿ ಸ್ನಾನ ಮಾಡುವೆಯಾ ? ತಪ್ಪಿದರೆ ಅದೂ ಇಲ್ಲವೋ ?"

"ಎಂಟ್ದಿನಕ್ಕೊಂತ್ಸಾರ್ತಿ ಮೈ ತೊಳ್ಕಳ್ತೀನಿ ಬುದ್ಧಿ. ನಮ್ಕೆಲ್ಸ ಅಂಗೈತೆ ಬುದ್ಧಿ. ಏನ್ಮಾಡಾನ."

"ತಲೆಗೆ ಎಣ್ಣೆ ಹಾಕಿ ಎಷ್ಟು ದಿನಗಳಾಯಿತು ?"

"ಏನ್ಬುದ್ಧಿ ? ಹುಡ್ಗಾಟ ಆಡ್ತಿರಾ ? ನಮ್ಮಂತೋರ್ಗೆಲ್ಲಾ ಯಾಕ್ಬುದ್ಧಿ ಎಣ್ಣೆ ? ಇನ್ನು ನಿಮ್ಗಾದ್ರೆ ಬೇಕೇಬೇಕು."

"ನಿನ್ನನ್ನು ನೋಡಿದರೆ ಅಸಹ್ಯವಾಗುತ್ತದೆ. ನಿನ್ನ ಮನೆಯಲ್ಲಿ ಯಾರೂ ಇಲ್ಲವೇ ?"

"ಇದಾರೆ ಬುದ್ಧಿ."

"ಯಾರು ?"

"ನನ್ಹೆಂಡ್ತಿ. ಮಗ."

"ಅವರೂ ನಿನ್ನ ಹಾಗೆಯೇ ಇರುವರಲ್ಲವೇ ?"

"ಗಂಡ ಇದ್ದಂಗೆ ಹೆಂಡ್ತಿನೂ, ಮಗಾನೂ ಇರೋದ್ ನ್ಯಾಯಾನೇ ಬುದ್ಧಿ."

"ನಿನ್ನ ಮನೆಯೂ ನೀನಿದ್ದ ಹಾಗೆಯೇ ಇರಬಹುದು ಅಲ್ಲವೇ ?"

"ಬಡ್ವಾ ಬುದ್ಧಿ. ಏನ್ಮಾಡನ. ನಿಮ್ಮಾವರಂಗೆ ಸಾವ್ಕಾರ ಆಗಿದ್ರೆ ಅವ್ರಂಗೆ ದೊಡ್ ಬಂಗ್ಲೇಗಿರ್ತಿದ್ದೆ. ಏನ್ಮಾಡಕಾಕ್ತೈತೆ ಹೇಳಿ ಬುದ್ಧಿ."

"ನಿನಗೆಷ್ಟು ಸಂಬಳ ಬರುತ್ತದೆ ?"

"ಬಾಳ ಕಮ್ಮಿ ಬುದ್ಧಿ. ಹೇಳಾಕೇ ನನ್ಗೆನೆ ನಾಚ್ಕೆ ಆಗ್ತೈತೆ."

"ಚಿಂತೆಯಿಲ್ಲ ಹೇಳು. ಅದರಲೆಲ್ಲಾ ನಾಚಿಕೆಯೇನಿದೆ?"

"ಮೂವತ್ರುಪಾಯ್ ಬುದ್ದಿ."

"ಅಷ್ಟೇನಾ?"

"ಹೌದು ಬುದ್ದಿ. ಅದ್ರಲ್ಲೆ ಮೂರ್ಜನ್ರು ಹೊಟ್ಟೆ ತುಂಬೇಕು."

"ನೀನು ಎಷ್ಟು ವರ್ಷಗಳಿಂದ ನನ್ನ ಮಾವನ ಮನೆಯಲ್ಲಿರುವೆ?"

"ಬಾಳ ವರ್ಷ್‌ದಿಂದ ಇದೀನಿ ಬುದ್ದಿ. ನಂಗೇ ಜ್ಞಾಪ್ಕವಿಲ್ಲ."

"ಸುಮಾರು ಇಪ್ಪತ್ತು ವರ್ಷಗಳಿಂದ ಇರುವೆಯಾ?"

"ಇರ್ಬೋದು ಬುದ್ದಿ."

ಎತ್ತು ನಿಧಾನವಾಗಿ ಮುಂದುವರಿಯುತ್ತಿತ್ತು. ರಾಜೇಂದ್ರಪುರದ ರೈಲ್ವೇ ನಿಲ್ದಾಣದಿಂದ ಸುಮಾರು ಎರಡು ಮೈಲಿ ದೂರ ಬಂದಿರಬಹುದು.

"ಕೆಂಚಾ! ನಿನ್ನ ಮಗನಿಗೆ ವಯಸ್ಸೆಷ್ಟು?"

"ಈಗದ್ನೇಳು ನಡೀತಾ ಐತೆ ಬುದ್ದಿ. ಕಿರ್‌ದೀವುಳ್ಗೆ ಬಂದ್ರೆ ಹದ್ನೆಂಟ್ರಗ್ ಕಾಲಿಡ್ತಾನೆ."

"ಏನು. ಕಿರ್‌ದೀವಳ್ಗಿಯೋ ಏನೋ. ನನಗೇನೂ ಅರ್ಥವಾಗದು. ಅವನೇನು ಕೆಲಸ ಮಾಡಿಕೊಂಡಿರುವನು?"

"ಏನೂ ಇಲ್ಕಣ್ ಬುದ್ದಿ."

"ಆ ವಯಸ್ಸಿಗೆ ಬಂದಿದ್ದರೂ, ಉಂಡಾಡಿಭಟ್ಟನಂತೆ ತಿರುಗಾಡಿಕೊಂಡಿರುವನೇ?"

"ನಾನಿರೋವರ್ಗು ಅಂಗೇ ಇರ್ಲಿ ಬುದ್ದಿ. ಆಮೇಲೆ ಅವ್ರವ್ರ ಪಾಡು ಅವ್ರಿಗಿದ್ದೇ ಇದೆ."

"ನೀನೊಬ್ಬ ದೊಡ್ಡಬುದ್ಧಿವಂತನೇ? ಸರಿ, ಹೋಗಲಿ. ಏನಾದರೂ ವಿದ್ಯಾಭ್ಯಾಸವಿರುವುದೇ?"

"ಅದೆಲ್ಲಾ ಆಗೈತೆ ಬುದ್ದಿ."

"ಎಲ್ಲಿಯವರೆವಿಗೆ ಓದಿರುವನು."

"ಅದೆಂತದೋ ಹೇಳ್ತಾರೆ ಬುದ್ದಿ. ನನ್ಗೇಳೋಕೆ ನಾಲ್ಗೆ ತಿರ್ಗೊಲ್ಲ. ಆದೆಲ್ಲ ಯಾರಿಗ್ಗೊತ್ತು."

"ನೀನು ಅವಿದ್ಯಾವಂತನಾದರೂ, ಮಗನಿಗಾದರೂ ಓದಿಸಿರುವೆಯಲ್ಲ. ಅಷ್ಟೇ ಸಂತೋಷ. ಹೋಗಲಿ. ನಿನ್ನ ಧಣಿಗಳು ನನ್ನನ್ನು ನೋಡಲು ಹಾತೊರೆಯುತ್ತಿರುವರಲ್ಲವೇ ?"

"ಹೌದು ! ಬುದ್ದಿ."

"ಈಗ ಎಷ್ಟು ಮೈಲಿ ಬಂದಿರುವೆವು?"

"ಮೂರ್ಮೈಲಿ ಬಂದಿದೇವೆ ಬುದ್ದಿ."

"ಇನ್ನೂ ಏಳು ಮೈಲಿಗಳ ದೂರವಿರುವುದೇ ?"

"ಹೌದು, ಕಣ್ಬುದ್ದಿ. ಏಟೊತ್ತು ಬನ್ನಿ ಬುದ್ದಿ. ಹೊತ್ಮುಳ್ಗೋ ದ್ರೊಳ್ಗೆ ಹಳ್ಳಿ ಸೇರ್ತೀವಿ."

"ಇಲ್ಲಿ ಕಾಡುಮೃಗಗಳಿಲ್ಲವೇ ?"

"ಬೇಕಾದಟ್ಟೈತೆ. ನಿಮ್ಗೇನ್ ಸಿಕಾರಿ ಆಡಕ್ ಬತ್ತೈತ ಬುದ್ದಿ ? ಬಂದೂಕ ತಂದಿದ್ದೀರಾ ? ಏನ್ಬುದ್ದಿ."

"ಏನೂ ತರಲಿಲ್ಲ. ನನಗೆ ಶಿಕಾರಿಯೂ ತಿಳಿಯದು. ಗಾಡಿಯನ್ನು ಬೇಗಬೇಗ ಓಡಿಸು. ಜಾಗ್ರತೆ ಹಳ್ಳಿಯನ್ನು ಸೇರೋಣ. ಮಗನ ಮುಖ ನೋಡಬೇಕಾಗಿದೆ."

"ಏಟೊಂದ್ ಪ್ರೀತಿ ಬುದ್ದಿ ಮಗುನ್ಮೇಲೆ. ಈಗ್ಲೆ ಇಂಗಾದ್ರೆ ಮುಂದಿ ನ್ನೆಂಗೋ ಏನೋ ನಾನ್ಕೇರೆ ಕಾಣೆ."

"ಆ ತಲೆಹರಟೆ ಮಾತುಗಳು ನಿನಗೆ ಬೇಡ. ನಾನು ಹೇಳಿದಷ್ಟು ಕೆಲಸ ಮಾಡು."

"ಆಗ್ಲಿ ಕಣ್ಬುದ್ದಿ. ನಂಗ್ಯಾಕ್ ತಲೆ ಹಲ್ಟೆ. ನೀವೇಳ್ದಂಗೆ ಕೇಳ್ತೀವ್ನಿ."

"ಗಾಡಿಯನ್ನು ಬೇಗ ಓಡಿಸು."

ಕೆಂಚನು ಎತ್ತಿನ ಬಾಲವನ್ನು ಮುರಿಯುತ್ತಲೇ ಎತ್ತು ನಡಿಗೆಯನ್ನು ಜೋರು ಮಾಡಿತು.

ಕಾಡುಮೃಗಗಳಾವುದಾದರೂ ಬಂದು ಗಾಡಿಯನ್ನು ಅಡ್ಡ ಹಾಕಿದರೆ ತಮ್ಮ ಗತಿಯೇನೆಂಬ ಭೀತಿಯು ಪ್ರದೀಪನ ಮನಕ್ಕೆ ಹೊಳೆದು, ತನ್ನ

ಮಾವನು ಗಾಡಿಯನ್ನು ಕಳುಹಿಸುವ ಬದಲು ಕಾರನ್ನು ಕಳುಹಿಸಬಾರದಿತ್ತೇ? ಎಂದು ತನ್ನ ಮಾವನನ್ನು ಮನದಲ್ಲಿಯೇ ಶಪಿಸಿದನು.

ಕೆಂಚನ ಮನದಲ್ಲಿ ಹಲವು ಬಗೆಯ ಯೋಚನೆಗಳುಂಟಾಯಿತು.

ಪ್ರದೀಪನು ಮಾತನಾಡದೇ ಇದ್ದ ಪ್ರಯುಕ್ತ ಯೋಚನಗೆ ಕಾರಣ ವಾಯಿತು.

ಪ್ರದೀಪನೂ ಸಹ ಹಲವು ಬಗೆಯಲ್ಲಿ ಯೋಚಿಸುತ್ತಾ ಚಂಪಾಪುರಕ್ಕೆ ಎಂದಿಗೆ ಹೋಗುವೆನೆಂದು ಹಾರೈಸುತ್ತಿದ್ದನು.

## ೧೦

ಚಂಪಾಪುರವು ಇನ್ನೂ ಐದು ಮೈಲಿಗಳ ದೂರದಲ್ಲಿದೆ. ಗಾಡಿಯು ಒಂದೇ ಸಮನಾಗಿ ಮುಂದುವರಿಯುತ್ತಲಿದೆ.

ಗಾಡಿಯು ಹೋಗುತ್ತಿದ್ದ ಮಾರ್ಗದ ಎರಡು ಕಡೆಗಳಲ್ಲಿಯೂ ಉನ್ನತಾಕಾರವಾಗಿ ಮರಗಳು ಒತ್ತೊತ್ತಾಗಿ ಬೆಳೆದು ಸೂರ್ಯಕಿರಣಗಳು ನೆಲದ ಮೇಲೆ ಬೀಳದಂತೆ ಅಡ್ಡಿಯನ್ನುಂಟು ಮಾಡಿವೆ.

ಇದ್ದಕ್ಕಿದ್ದ ಹಾಗೆಯೇ ಮರಗಳ ಸಂದಿನಿಂದ ಅಜಾನುಬಾಹುವಾದ ವ್ಯಕ್ತಿಯೊಬ್ಬನು ಹೊರಗೆ ಬಂದು ಗಾಡಿಗೆ ಅಡ್ಡಲಾಗಿ ನಿಂತನು.

ಎತ್ತು ಬೆದರಿದಂತಾಗಿ ಹಾಗೇ ನಿಂತಿತು.

ವ್ಯಕ್ತಿಯ ಉಡುಪುಗಳು ಕಾಡುಜನರ ಉಡುಪಿನಂತೆಯೇ ಇದೆ. ಮೀಸೆಯು ಮಾತ್ರ ಅವನ ಪ್ರಮಾಣವನ್ನು ಮೀರಿವೆ. ಅವನ ಬಲಗೈಯಲ್ಲಿ ಪಿಸ್ತೂಲೂ, ಎಡಗೈಯಲ್ಲಿ ಮಚ್ಚುಗತ್ತಿಯೂ ಇದೆ.

ಆ ವ್ಯಕ್ತಿಯನ್ನು ನೋಡುತ್ತಲೇ ಕೆಂಚನು, "ಅಯ್ಯಯ್ಯೋ" ಎಂದು ಕೂಗಿಕೊಂಡನು.

ವ್ಯಕ್ತಿಯು ತನ್ನ ಗಡಸು ಧ್ವನಿಯಲ್ಲಿ—

"ಏ! ಅಧಮಾ!! ಕೂಗಬೇಡ. ತುಟಿ ಎರಡು ಮಾಡಿದರೆ, ಇದೋ ಮಚ್ಚುಗತ್ತಿಯಿಂದ ದನವನ್ನು ಕತ್ತರಿಸುವಂತೆ ನಿನ್ನನ್ನು ಕತ್ತರಿಸುವೆನು. ಮಾತನಾಡಬೇಡ. ಗಾಡಿಯಲ್ಲಿ ಯಾರಿರುವರು?" ಎಂದು ಕೇಳಿದನು.

ಕೆಂಚನು ತಡವರಿಸುತ್ತಾ—

"ಅಯ್ಯಯ್ಯೋ! ಕೊಲ್ಬೇಡ ಸ್ವಾಂಯ. ನಿನ್ಕಾಲಿಗ್ಬಿದ್ ಬೇಡ್ಕಳ್ತೀನಿ. ನಾನ್ ಮಕ್ಳುಮರಿಯೋನು?" ಎಂದನು.

"ಆ ನಿನ್ನ ಗಿಲೀಟು ಮಾತು ನಿನ್ನಲ್ಲಿಯೇ ಇರಲಿ. ಗಾಡಿಯಲ್ಲಿ ಯಾರಿರುವರು ? ಬೊಗಳು ?"

ಯಾರೋ ಕಳ್ಳನು ಗಾಡಿಯನ್ನು ಅಡ್ಡ ಹಾಕಿರುವನೆಂದು ಗಾಡಿಯ ಒಳಗೆ ಕುಳಿತಿದ್ದ ಪ್ರದೀಪನು ಭಾವಿಸಿಕೊಂಡನು. ಗಾಡಿಯ ಒಳಗಡೆಯಿಂದಲೇ ಭಯಂಕರವಾದ ಮೀಸೆಯನ್ನು ಹೊತ್ತು ನಿಂತಿದ್ದ ಕಳ್ಳನ ಮುಖವನ್ನು ನೋಡಿದನು.

ಕಳ್ಳರನ್ನೂ, ಕೊಲೆಗಾರರನ್ನೂ ಹಲವು ಬಗೆಯ ಯುಕ್ತಿ, ಚತುರತೆಯಲ್ಲಿ ಹಿಡಿದು, ಭಯವೆಂದರೇನೆಂಬುದನ್ನೇ ಅರಿಯದೆ ಇದ್ದ ಪ್ರದೀಪನ ಧೈರ್ಯವೆಲ್ಲಾ ಲಯವಾಯಿತಲ್ಲದೆ, ತನ್ನ ಮಗನ ಮುಖವನ್ನು ನೋಡುವೆನೋ ಇಲ್ಲವೋ ಎಂಬ ಅನುಮಾನವುಂಟಾಯಿತು.

ಕಳ್ಳನ ಪ್ರಶ್ನೆಗೆ ಕೆಂಚನು—

"ಇಣಚ್ಪೆಟ್ರು" ಎಂದನು.

"ಯಾವ ಇಣಸ್ಪೆಕ್ಟರ್, ಹೇಳು ?"

"ಜಗದೀಶ್‌ಪುರ್ಧೋರು."

ಕಳ್ಳನು ಜೋರಾಗಿ ನಕ್ಕು—

"ಹ್ಹ ! ಹ್ಹಾ !! ಇಂದಿಗೆ ನನ್ನ ಆಸೆಯು ಫಲಿಸಿತು. ಬಹು ದಿನಗಳಿಂದ ಕಾಯುತ್ತಿದ್ದೆನು" ಎಂದು ಹೇಳಿ ಗಾಡಿಯ ಹಿಂದೆ ಬಂದನು.

ನಿರಾಯುಧನಾಗಿ ಕುಳಿತಿದ್ದ ಪ್ರದೀಪನ ಪ್ರಾಣವೇ ಹೋದಂತಾಯಿತು. ಇನ್ನು ತನ್ನ ಅವಸ್ಥೆಯು ಏನಾಗುವುದೋ, ಏನೋ ಎಂದು ಮನಸ್ಸು ಅಳುಕಿತು. ಆಗ ಒಬ್ಬ ಕಳ್ಳನಿಂದ ಅವಮಾನವಾಯಿತು. ಈಗ ಮತ್ತೊಬ್ಬ ಕಳ್ಳನಿಂದ ಅವಮಾನವಾಗಬೇಕಾಗುವುದೆಂದು ನೊಂದುಕೊಂಡನು. ತಪ್ಪಿಸಿಕೊಂಡು ಓಡಲು ಮಾರ್ಗವೇ ಇಲ್ಲ.

ಕೆಂಚನು ಗಾಡಿಯ ಮುಂದೆ ನಿಂತಿದ್ದನು. ಅವನ ಕೈಕಾಲುಗಳು ನಡುಗುತ್ತಲಿವೆ.

ಕಳ್ಳನು ಗಾಡಿಯ ಹಿಂದೆ ಬಂದನಂತರ ಪ್ರದೀಪನಿಗೆ ಪಿಸ್ತೂಲನ್ನು ತೋರಿಸಿ—

"ಪ್ರದೀಪಾ ! ಮರ್ಯಾದೆಯಿಂದ ಕೆಳಗಿಳಿದು ಬಾ. ಬಾರದೇ ಹೋದರೆ ಕುಳಿತಲ್ಲಿಯೇ ಶವವಾಗುವೆ" ಎಂದನು.

ಪ್ರಾಣಭೀತಿಯಿಂದ ತತ್ತರಿಸುತ್ತಿದ್ದ ಪ್ರದೀಪನು ಮಾತನಾಡದೆ ಕೆಳಗಿಳಿದನು.

ಕಳ್ಳನು ವಿಕಟವಾಗಿ ನಕ್ಕನು.

ಆ ನಗುವು ನಿಶ್ಶಬ್ದತೆಯಿಂದ ಕೂಡಿದ್ದ ಅರಣ್ಯದಲ್ಲಿ ಪ್ರತಿಧ್ವನಿಯಾಯಿತು.

ಪ್ರದೀಪನು ಆ ಭೀತಿಯಲ್ಲಿಯೂ, ಕಳ್ಳನ ಮುಖವನ್ನು ನೋಡಲು ಎಲ್ಲಿಯೋ ನೋಡಿದಂತೆ ಭಾಸವಾಯಿತು. ಹಿಂದೆ ನೋಡಿದ ಹಲವರ ಮುಖಗಳನ್ನು ಜ್ಞಾಪಿಸಿಕೊಂಡು ನೋಡಿದನು ಪ್ರಯೋಜನವಾಗಲಿಲ್ಲ.

ಕಳ್ಳನು ಜೋರಾಗಿ ನಕ್ಕು—

"ಪ್ರದೀಪಾ ! ಹಾಗೇಕೆ ನನ್ನನ್ನು ನೋಡುತ್ತಿರುವೆ ? ನನ್ನನ್ನು ಯಾರೆಂದು ತಿಳಿದಿರುವೆ ? ಹಿಂದೆ ಜಗದೀಶಪುರದ ರೈಲ್ವೆ ಗೂಡ್‌ಷೆಡ್ಡಿನಲ್ಲಿ ಆರು ಜೊತೆ ಸೈಕಲ್ ಪೆಡಲ್‌ಗಳನ್ನು ಕದ್ದು, ನಿನ್ನಿಂದ ಹಿಡಿಯಲ್ಪಟ್ಟು, ವಿಚಾರಣೆಗೆ ಗುರಿಯಾಗಿ ಎರಡು ತಿಂಗಳು ಕಠಿಣಶಿಕ್ಷೆಯನ್ನು ಅನುಭವಿಸಿದ ಗಿರೀಶನೇ ನಾನು. ಬಿಡುಗಡೆಯಾದನಂತರ ನಿನ್ನ ಮೇಲೆ ಸೇಡು ತೀರಿಸಿಕೊಳ್ಳಲು ಬಹುದಿನಗಳಿಂದ ಈ ಸ್ಥಳದಲ್ಲಿ ಕಾಯುತ್ತಿದ್ದೆನು. ನಿನ್ನ ಮಾವನ ಮನೆಯು ಚಂಪಾಪುರದಲ್ಲಿರುವುದರಿಂದ ನೀನು ಯಾವ ದಿನವಾದರೂ ಈ ಮಾರ್ಗವಾಗಿ ಬರುವೆಯೆಂದು ಯೋಚಿಸಿಕೊಂಡಿದ್ದೆನು. ಅದರಂತೆ ಬಂದಿರುವೆ. 'ಹ್ಞೂಂ' ಇನ್ನು ತಡವೇಕೆ ? ನಿನ್ನ ಕೈಗಳನ್ನು ಮೇಲಕ್ಕೆ ಎತ್ತು" ಎಂದನು.

ಪ್ರದೀಪನು ತನ್ನ ಕೈಗಳನ್ನು ಮೇಲಕ್ಕೆ ಎತ್ತಿದನು. ಗಿರೀಶನನ್ನು ಹಿಡಿದದ್ದೂ, ಬಳಿಕ ವಿಚಾರಣೆಗೆ ಗುರಿಪಡಿಸಿದ್ದೂ ನೆನಪಿಗೆ ಬಂದು, ಈ ಕಳ್ಳನು ತನ್ನ ಮೇಲೆ ಸೇಡು ತೀರಿಸಿಕೊಳ್ಳಲು ಬಹುದಿನಗಳಿಂದಲೂ ಕಾಯುತ್ತಿದ್ದನೆಂದುಕೊಂಡನು.

ಗಿರೀಶನನ್ನು ಹಿಡಿದು ಆ ವೇಳೆಗಾಗಲೇ ಒಂದು ವರ್ಷದ ಮೇಲಾಗಿತ್ತು.

ಪ್ರದೀಪನು ಕೈಗಳನ್ನು ಮೇಲಕ್ಕೆ ಎತ್ತುತ್ತಲೇ ಗಿರೀಶನು ತನ್ನ ಜೇಬಿನಿಂದ ಹಗ್ಗವನ್ನು ತೆಗೆದು, ಆತನ ಮುಂದೆಸೆದು ಗಾಡಿಯ ಮುಂದೆ ನಿಂತಿದ್ದ ಕೆಂಚನನ್ನು ಕರೆದನು.

ಕೆಂಚನು ನಡುಗುತ್ತಾ ಮುಂದೆ ಬಂದು ನಿಂತನು.

ಗಿರೀಶನು ಹಗ್ಗದಿಂದ ಪ್ರದೀಪನ ಕೈಗಳನ್ನು ಕಟ್ಟುವಂತೆ ಹೇಳಲು, ಕೆಂಚನು ಒಪ್ಪದೆ ನಿಂತಲ್ಲಿಯೇ ನಿಂತನು.

ಗಿರೀಶನು ಮಚ್ಚುಗತ್ತಿಯನ್ನು ತೋರಿಸಿ ಗದರಿಸಲು ಕೆಂಚನು ಹಗ್ಗದಿಂದ ಪ್ರದೀಪನ ಕೈಗಳನ್ನು ಕಟ್ಟಿದನು.

ಬಳಿಕ ಗಿರೀಶನು ಕೆಂಚನಿಗೆ ಗಾಡಿಯ ಬಳಿಯಲ್ಲಿಯೇ ಇರುವಂತೆ ಹೇಳಿ ಪ್ರದೀಪನನ್ನು ಎಳೆದುಕೊಂಡು ಒಂದು ಮರದ ಸಮೀಪಕ್ಕೆ ಹೋದನು.

ಪ್ರದೀಪನ ಶರೀರವಾದ್ಯಂತವೂ ಭಯದಿಂದ ನಡುಗಿಹೋಯಿತು. ತನ್ನ ಮಗನು ಮೂಲಾ ನಕ್ಷತ್ರದಲ್ಲಿ ಹುಟ್ಟಿರುವುದರಿಂದ ತನಗೀ ಅವಸ್ಥೆಯಾಗುತ್ತಿರುವುದೆಂದುಕೊಂಡನು.

ಗಿರೀಶನು · ಪ್ರದೀಪನನ್ನು ಮರದ ಬಳಿಗೆ ಕರೆದುಕೊಂಡುಹೋಗಿ ಅವನನ್ನು ಆ ಮರಕ್ಕೆ ಕಟ್ಟಿ ಮತ್ತೆ ವಿಕಟವಾಗಿ ನಕ್ಕನು.

ಕೆಂಚನು ಬಿಟ್ಟ ಕಣ್ಣಿನಿಂದ ಆ ಘಟನೆಯನ್ನು ನೋಡುತ್ತಲೇ ಇದ್ದನು.

ಪ್ರದೀಪನನ್ನು ಮರಕ್ಕೆ ಕಟ್ಟಿ ಗಿರೀಶನು—

"ಪ್ರದೀಪಾ ! ನಾನು ಎರಡು ತಿಂಗಳು ಶಿಕ್ಷೆಯನ್ನು ಅನುಭವಿಸಿದ ಪ್ರತೀಕಾರವಾಗಿ ನೀನು ಈ ಅವಸ್ಥೆಯಲ್ಲಿ ಬೆಳಗಾಗುವವರೆವಿಗೆ ಇದ್ದರೆ ಸಾಕು. ಅಲ್ಲಿಗೆ ಇಬ್ಬರ ಶಿಕ್ಷೆಯೂ ಸರಿಸಮಾನವಾಗುತ್ತದೆ. ನಾನು ನಿನ್ನ ಪ್ರಾಣವನ್ನು ತೆಗೆಯಲಾರೆ, ನಾಳೆಯ ದಿನ ಈ ಮಾರ್ಗದಲ್ಲಿ ಓಡಾಡುವವರಾರಾದರೂ ನಿನ್ನನ್ನು ನೋಡಿ ಬಿಡಿಸುವರು. ಈಗ ಮಾತ್ರ ಯಾರೂ ಬರಲಾರರು. ಒಂದುವೇಳೆ ರಾತ್ರಿ ಕಾಡು ಮೃಗಗಳ ಪಾಲಾದರೂ ಆಗಬಹುದು. ಅದು ನಿನ್ನ ಅದೃಷ್ಟದ ಫಲ. ನಿನ್ನ ಬಿಡುಗಡೆಯಾದನಂತರ ಮುಂದೆ ನನ್ನನ್ನು ಹಿಡಿಯಲು ಪ್ರಯತ್ನಿಸಬೇಡ. ಹಾಗೇನಾದರೂ ಪ್ರಯತ್ನ ಪಟ್ಟಿಯಾದರೆ, ಮತ್ತೆ ಇದೇಗತಿ ಪ್ರಾಪ್ತವಾಗುತ್ತದೆ. ಎಚ್ಚರಿಕೆ" ಎಂದು ಹೇಳಿದನು.

ಪ್ರದೀಪನು ನಿರ್ವಿಣ್ಣವದನನಾದನು. ಇನ್ನು ತನ್ನ ಅವಸ್ಥೆಯು ಇಲ್ಲಿಯೇ ಪರಿಸಮಾಪ್ತಿಯಾಗುವುದೆಂದುಕೊಂಡನು.

ಆತನು ತನ್ನ ಜೀವಮಾನದಲ್ಲಿ ಅವರೆಗೆ ಅನುಭವಿಸಿದ ಘಟನೆಗಳೆಲ್ಲಾ ಕಣ್ಮುಂದೆ ಸುಳಿದು ಮಿಂಚಿನಂತೆ ಮಾಯವಾಯಿತು.

ಗಿರೀಶನು ಗಾಡಿಯ ಬಳಿಗೆ ಬಂದು—

"ನಿನ್ನ ಹೆಸರೇನು ?" ಎಂದು ಕೆಂಚನಿಗೆ ಕೇಳಿದನು.

"ನನ್ನೆಸ್ರು ಕೆಂಚ ಅಂತಾರೆ ಬುದ್ದಿ."

—ಎಂದು ಕೆಂಚನು ಉತ್ತರವಿತ್ತನು.

"ನಿನಗೆ ಬದುಕಬೇಕೆಂಬ ಆಸೆಯಿರುವುದೇ ?"

"ಐತೆ ಬುದ್ದಿ."

"ಹಾಗಿದ್ದರೆ ಗಾಡಿಯನ್ನು ಹಿಂದಿರುಗಿಸು."

"ಎಲ್ಲಿಗೆ ಬುದ್ದಿ ?"

"ಎಲ್ಲಿಗಾದರೂ ಆಗಲಿ. ನಾನು ಹೇಳಿದಂತೆ ಕೇಳಿದೆಯಾದರೆ ನಿನ್ನ ಪ್ರಾಣ ಉಳಿಯುವುದು ಇಲ್ಲದೇ ಹೋದರೆ ನಿನ್ನನ್ನೂ ಮರಕ್ಕೆ ಕಟ್ಟುವೆನು."

"ನೀವೇಳ್ದಂಗೆ ಕೇಳ್ತೀನಿ ಬುದ್ದಿ. ಅಂಗೆಲ್ಲ ಮಾಡ್ಬೇಡಿ."

"ಹಾಗಿದ್ದಮೇಲೆ ನಡೆ."

"ಆಗ್ಲಿ ಬುದ್ದಿ."

ಗಿರೀಶನು ಗಾಡಿಯ ಹಿಂದೆ ಬಂದನು.

ಕೆಂಚನು ಗಾಡಿಯನ್ನು ತಿರುಗಿಸಿ ರಾಜೇಂದ್ರಪುರದ ನಿಲ್ದಾಣದ ಕಡೆ ಓಡಿಸಿದನು.

ಆ ದೃಶ್ಯವನ್ನು ನೋಡುತ್ತಿದ್ದ ಪ್ರದೀಪನ ಸರ್ವಾಂಗದ ರಕ್ತವೆಲ್ಲಾ ಬಿಸಿಯಾದರೂ ಆ ಸಮಯದಲ್ಲಿ ಏನೂ ಮಾಡಲಾರದವನಾದನು. ರಾಜೇಂದ್ರಪುರದ ರೈಲ್ವೇ ನಿಲ್ದಾಣದವರೆವಿಗೆ ಕೆಂಚನನ್ನು ಕರೆದುಕೊಂಡು ಹೋಗಿ, ಅಲ್ಲಿ ಆತನಿಗೇನಾದರೂ ಅಪಾಯವುಂಟುಮಾಡದೆ ಬಿಡಲಾರನೆಂದುಕೊಂಡನು.

ಗಾಡಿಯು ಕಣ್ಮರೆಯಾಗುವವರೆವಿಗೂ ಆ ಕಡೆಯೇ ನೋಡುತ್ತಿದ್ದು, ಅದು ಕಣ್ಮರೆಯಾಗುತ್ತಲೇ ಅವನ ಕಣ್ಣಿನಿಂದ ನೀರಿನ ಹನಿಗಳುದುರಿದುವು.

ಸುಮಾರು ಐದು ಘಂಟೆಯ ವೇಳೆಯಾಗಿದ್ದರೂ, ಗಿಡಮರಗಳು ಒತ್ತಾಗಿ ಬೆಳೆದಿದ್ದ ಪ್ರಯುಕ್ತ ಆ ಪ್ರದೇಶದಲ್ಲಿ ಕತ್ತಲೆಯೇ ಆದಂತೆ ತೋರುತ್ತಿತ್ತು.

ಪ್ರದೀಪನು ತನಗೆ ಜ್ಞಾಪಕಕ್ಕೆ ಬಂದ ದೇವರನ್ನೆಲ್ಲಾ ಸ್ಮರಿಸಿಕೊಂಡು ಆಯಾ ದೇವರಿಗೆಲ್ಲಾ ಪ್ರತ್ಯೇಕ ಪ್ರತ್ಯೇಕವಾಗಿ ಹರಕೆ ಹೊತ್ತು ಈ ದಿನವೇ ತನ್ನ ಬಿಡುಗಡೆ ಮಾಡಬೇಕೆಂದು ಬೇಡಿಕೊಂಡನು.

ಒಂದು ದಿನವಾದರೂ ದೇವರಿಗೆ ಕೈಯೆತ್ತಿ ಮುಗಿಯದವನು ಇಂದು ಜ್ಞಾಪಕಕ್ಕೆ ಬಂದ ದೇವರನ್ನೆಲ್ಲಾ ಸ್ಮರಿಸಿ ಹರಕೆ ಕಟ್ಟಿಕೊಳ್ಳುವಂತಾದನು.

ಕಾಲಪರಿಸ್ಥಿತಿಯೇ ಹಾಗಿದೆ.

ಸಂಕಟಬಂದಾಗ ವೆಂಕಟರಮಣನೆಂಬಂತೆ, ಕಷ್ಟಕಾಲ ಬಂದಾಗ ಮಾತ್ರ ದೇವರನ್ನು ಸ್ಮರಿಸಿ, ಉಳಿದಸಮಯದಲ್ಲಿ ದೇವರೆಂಬ ಉಚ್ಚಾರವನ್ನೇ ಮರೆಯುವರು.

ಪ್ರದೀಪನ ಅವಸ್ಥೆಯು ಅದೇ ರೀತಿಯಾಯಿತು.

ಸುಮಾರು ಒಂದು ಘಂಟೆ ಕಳೆಯಿತು. ಪ್ರದೀಪನು ಯಥಾಸ್ಥಿತಿಯಲ್ಲಿಯೇ ಇದ್ದನು.

ಆ ವೇಳೆಗೆ ಚಂಪಾಪುರದಿಂದ ರಾಜೇಂದ್ರಪುರಕ್ಕೆ ಹೋಗುತ್ತಿದ್ದ ಪ್ರಯಾಣಿಕನನ್ನು ಕಂಡನು. ಕತ್ತಲು ಕವಿಯುತ್ತಿದ್ದುದರಿಂದ ಆತನು ವೇಗವಾಗಿಯೇ ಹೋಗುತ್ತಿದ್ದನು.

ಯಾರಾದರೂ ಬಂದಾರೆಂದು ನೋಡುತ್ತಿದ್ದ ಪ್ರದೀಪನಿಗೆ ಆತನನ್ನು ನೋಡುತ್ತಲೇ ಹೋದ ಜೀವ ಬಂದಂತಾಯಿತು.

ಕೂಡಲೇ ಆತನನ್ನು ಕೂಗಿ ಕರೆದು ತನ್ನ ಬಂಧನವನ್ನು ಬಿಡಿಸಲು ಹೇಳಿದನು.

ಆ ಪ್ರಯಾಣಿಕನು ಹತ್ತಿರ ಬರದೆ, ದೂರದಲ್ಲಿಯೇ ನಿಂತುಕೊಂಡು—

"ನೀವಾರು ? ಎಲ್ಲಿಗೆ ಹೊರಟಿರುವಿರಿ ? ನಿಮ್ಮನ್ನು ಈ ಮರಕ್ಕೆ ಕಟ್ಟಿದವರಾರು ?" ಎಂದು ಕೇಳಿದನು.

ತಾನಾರೆಂದು ತಿಳಿಸಿದರೆ ಅವಮಾನವೆಂದರಿತ ಪ್ರದೀಪನು ಆ ಸಮಯದಲ್ಲಿ ಸುಳ್ಳು ಹೇಳಬೇಕಾಯಿತು.

"ನಾನೊಬ್ಬ ಪ್ರಯಾಣಿಕ. ಚಂಪಾಪುರಕ್ಕೆ ಹೊರಟಿದ್ದೆನು. ಇಲ್ಲಿ ಕಳ್ಳರು ನನ್ನನ್ನು ಅಡ್ಡಗಟ್ಟಿ, ನನ್ನಲ್ಲಿದ್ದುದೆಲ್ಲವನ್ನೂ ಕಿತ್ತುಕೊಂಡು, ಸಾಲದುದಕ್ಕೆ ಈ ಮರಕ್ಕೆ ಕಟ್ಟಿಹಾಕಿ ಹೋಗಿರುವರು. ನನ್ನ ಬಂಧನವನ್ನು ಬಿಡಿಸಿ. ನಿಮ್ಮ ಉಪಕಾರವನ್ನು ನನ್ನ ಜೀವಾವಧಿ ಮರೆಯಲಾರೆ. ಈ ವೇಳೆಯಲ್ಲಿ ನೀವು ದೇವರಂತೆ ಬಂದಿರುವಿರಿ."

ಆ ಪ್ರಯಾಣಿಕನು ಕೂಡಲೇ ಪ್ರದೀಪನ ಬಂಧನವನ್ನು ಬಿಚ್ಚಲು ಇನ್‌ಸ್ಪೆಕ್ಟರನಿಗೆ ಪುನರ್ಜನ್ಮವಾದಂತಾಯಿತು.

ಆ ಪ್ರಯಾಣಿಕನಿಗೆ ತನ್ನ ಕೃತಜ್ಞತೆಯನ್ನರ್ಪಿಸಿದನು.

ಆ ಪ್ರಯಾಣಿಕನು—

"ನಾನು ರಾಜನಗರಕ್ಕೆ ಹೋಗಬೇಕಾಗಿದೆ. ರಾಜೇಂದ್ರಪುರದಿಂದ ರೈಲು ಹೊರಡಲು ಇನ್ನು ಅರ್ಧ ಘಂಟೆ ಮಾತ್ರ ವೇಳೆಯಿದೆ. ತಡವಾದರೆ ರೈಲು ಸಿಗಲಾರದು. ನೀವು ಇದೇ ರಸ್ತೆಯಲ್ಲಿ ಹೋಗಿ. ಚಂಪಾಪುರವು ಐದು ಮೈಲಿಗಳ ದೂರವಿದೆ" ಎಂದು ಹೇಳಿ ಪ್ರದೀಪನ ಪ್ರತ್ಯುತ್ತರವನ್ನು ನಿರೀಕ್ಷಿಸದೆ ಹಗ್ಗವನ್ನು ತೆಗೆದುಕೊಂಡು ಹೊರಟುಹೋದನು.

ಆತನು ಹಗ್ಗವನ್ನು ತೆಗೆದುಕೊಂಡು ಹೋದುದನ್ನು ನೋಡಿ ಪ್ರದೀಪನಿಗೆ ಆಶ್ಚರ್ಯವಾಯಿತು. ತನ್ನ ಬಂಧನವನ್ನು ಬಿಚ್ಚಿದ್ದಕ್ಕೆ ಹಗ್ಗವೇ ಲಾಭವಾಯಿತೆಂದುಕೊಂಡನು.

ಆ ಪ್ರಯಾಣಿಕನು ಕಣ್ಮರೆಯಾಗುವವರೆವಿಗೂ ಅತನನ್ನೇ ನೋಡುತ್ತಿದ್ದು, ಬಳಿಕ ತನ್ನ ಮೊರೆಯನ್ನು ಕೇಳಿ ದೇವರು ಈತನನ್ನು ಕಳುಹಿಸಿರುವನೆಂದುಕೊಂಡನು.

ಬಳಿಕ ಪ್ರದೀಪನಿಗೆ ಚಂಪಾಪುರಕ್ಕೆ ಹೋಗಬೇಕೇ? ಅಥವಾ ಗಾಡಿಯನ್ನು ಹಿಡಿಯಬೇಕೇ? ಎಂಬ ಯೋಚನೆಯುಂಟಾಯಿತು.

'ಗಾಡಿಯು ಈ ವೇಳೆಗಾಗಲೇ ಬಹುದೂರ ಹೋಗಿರಬಹುದು. ನಾನು ಹೋಗುವ ವೇಳೆಗೆ ಗಾಡಿಯನ್ನು ಎಲ್ಲಿಯಾದರೂ ಬಚ್ಚಿಡಬಹುದು. ತಪ್ಪಿದರೆ ಗಾಡಿಯಲ್ಲಿದ್ದ ಸಾಮಾನನ್ನು ತೆಗೆದುಕೊಂಡು ಕೆಂಚನನ್ನು ಹಿಂದಕ್ಕೆ ಕಳುಹಿಸಬಹುದು. ಆದ್ದರಿಂದ ಗಾಡಿಯನ್ನು ಹಿಂಬಾಲಿಸುವುದು ಸರಿಯಲ್ಲ. ಈಗ ಪ್ರಾಣವುಳಿದುದೇ ಪುನರ್ಜನ್ಮವಾದಂತಾಗಿದೆ. ಪ್ರಾಣವೊಂದಿದ್ದರೆ ಕಳೆದು

ಹೋದ ವಸ್ತುವಿಗೆ ನಾಲ್ಕರಷ್ಟು ಸಂಪಾದಿಸಬಹುದು. ಪ್ರಾಣವೇ ಹೊರಟು ಹೋದರೆ ಸಂಪಾದಿಸುವುದಾದರೂ ಏನಿದೆ? ಎರಡು ಸಾರಿ ಪುನರ್ಜನ್ಮವಾದಂತಾಗಿದೆ. ಮುಂದೆ ಏನಾಗುವುದೋ ಏನೋ. ದೇವರೇ ಬಲ್ಲ. ಈಗ ಚಂಪಾಪುರಕ್ಕೇ ಹೋಗುವೆನು. ಇಲ್ಲಿ ನಡೆದ ಘಟನೆಯೇನೂ ಅವರಿಗೆ ತಿಳಿಯದು. ನಾನು ತಿಳಿಸದೆ ಇದ್ದರೂ ಕೆಂಚನು ತಿಳಿಸದಿರುವುದಿಲ್ಲ. ಈಗ ಯಾವ ದಾರಿಯನ್ನಿಡಿದು ಹೊರಟರೂ ಅವಮಾನವಾಗುವುದು ತಪ್ಪದು. ಕೆಂಚನೊಬ್ಬನು ಇಲ್ಲದೆ ಹೋಗಿದ್ದರೆ ಹೇಗಾದರೂ ತಪ್ಪಿಸಿಕೊಳ್ಳಬಹುದಿತ್ತು. ಆತ್ತನಿರುವುದರಿಂದ ಮುಚ್ಚುಮರೆ ಮಾಡಲು ಅವಕಾಶವಿಲ್ಲ. ಆದ್ದರಿಂದ ಚಂಪಾಪುರಕ್ಕೆ ಹೋಗುವುದೇ ಸರಿ.' ಎಂದು ನಿರ್ಧರಿಸಿಕೊಂಡು ಚಂಪಾಪುರದ ದಾರಿಯನ್ನಿಡಿದು ಹೊರಟನು.

ಬೇಗನೆ ಹಳ್ಳಿಯನ್ನು ಸೇರಬೇಕೆಂಬ ಉದ್ದೇಶವುಳ್ಳವನಾಗಿ ಬೇಗಬೇಗನೆ ಹೆಜ್ಜೆಗಳನ್ನು ಹಾಕತೊಡಗಿದನು.

## ೧೧

ಸಾಯಂಕಾಲ ಆರೂವರೆ ಏಳು ಘಂಟೆಯ ಸಮಯ. ಬೇಸಾಯ ಗಾರರು ತಮ್ಮ ಕೆಲಸವನ್ನು ಮುಗಿಸಿಕೊಂಡು ಹಿಂದಿರುಗುತ್ತಿರುವರು. ದನಕರು ಗಳಾಗಲೇ ದೊಡ್ಡಿಯನ್ನು ಸೇರಿಕೊಂಡಿವೆ. ಹಳ್ಳಿಯ ಹೆಂಗಸರು ಹೊಳೆ ಯಿಂದ ನೀರನ್ನು ಹೊತ್ತುಕೊಂಡು ಸಾಲುಸಾಲಾಗಿ ಹೋಗುತ್ತಿರುವರು. ಅಲ್ಲಲ್ಲಿ ಹುಡುಗರು ಗುಂಪುಗುಂಪಾಗಿ ಬಗೆಬಗೆಯ ಆಟಪಾಟಗಳಲ್ಲಿ ಮಗ್ನ ರಾಗಿರುವರು.

ಪ್ರದೀಪನು ಆ ವಿನೋದ ಕೂಟಗಳೆಲ್ಲವನ್ನು ನೋಡುತ್ತಾ ತನ್ನ ಮಾವನ ಮನೆಯ ಬಳಿಗೆ ಹೋದನು.

ಶ್ರೀಕಂಠಯ್ಯನವರು ತಮ್ಮ ಮನೆಯ ಮುಂದಿದ್ದ ಜಗಲಿಯ ಮೇಲೆ ಕುಳಿತು ತಮ್ಮ ಮಿತ್ರರೊಡನೆ ಮಾತನಾಡುತ್ತಿದ್ದರು.

ಪ್ರದೀಪನು ಅವರ ಸಮೀಪಕ್ಕೆ ಹೋಗುತ್ತಲೇ ಶ್ರೀಕಂಠಯ್ಯನವರು ಅಳಿಯನು ಬಂದುದನ್ನು ನೋಡಿ, ಏಕಾಏಕಿ ಆತನು ಬಂದ ಕಾರಣವನ್ನರಿ ಯದೆ, ತಮ್ಮ ಸೊಸೆಯನ್ನು ಕರೆದು ಪ್ರದೀಪನಿಗೆ ನೀರು ತಂದುಕೊಡುವಂತೆ ಹೇಳಿದರು.

ಪ್ರದೀಪನು ಕೈಕಾಲು ತೊಳೆದುಕೊಂಡು ಒಳಗೆ ಹೋಗುತ್ತಲೇ ಮನೆ ಮಕ್ಕಳೆಲ್ಲರೂ ಅವನನ್ನು ಮುತ್ತಿಕೊಂಡರು.

ಶ್ರೀಕಂಠಯ್ಯನವರು ಒಳಗೆ ಬಂದು ಅಳಿಯನಿಗೆ—

"ಏಕಾಏಕಿ ಇದ್ದಕ್ಕಿದ್ದ ಹಾಗೆಯೇ ಬಂದುಬಿಟ್ಟಿರಲ್ಲ. ಮಗನ ಮುಖ ವನ್ನು ನೋಡುವ ಆಸೆಯಾಯಿತೇ? ಒಂದು ಕಾಗದವನ್ನೂ ಬರೆಯಬಾರದೇ? ರೈಲ್ವೇ ನಿಲ್ದಾಣದ ಬಳಿಗೆ ಕಾರನ್ನು ಕಳುಹಿಸುತ್ತಿದ್ದೆನಲ್ಲ. ಹತ್ತು ಮೈಲಿ

ನಡೆದುಕೊಂಡೇ ಬಂದಿರುವಿರಲ್ಲ. ಅದೂ ಅಲ್ಲದೆ ಉಟ್ಟಬಟ್ಟೆಯ ಮೇಲೇ ಬಂದಿರುವಿರಿ" ಎಂದರು.

ಮಾವನ ಮಾತುಗಳನ್ನು ಕೇಳುತ್ತಲೇ ಪ್ರದೀಪನಿಗುಂಟಾದ ಆಶ್ಚರ್ಯ ವನ್ನು ವರ್ಣಿಸಲಾಗದುದಾಯಿತು.

ತನ್ನ ತಲೆಯಮೇಲೆ ಆಕಾಶವೇ ಕಳಚಿಬಿದ್ದಿತೆಂದರೂ ಸರಿ, ಹಿಮಾ ಲಯ ಪರ್ವತಕ್ಕೆ ರೆಕ್ಕೆ ಬಂದು ಹಾರಿ ಸಹರಾ ಮರುಭೂಮಿಯ ಮಧ್ಯದಲ್ಲಿ ಇಳಿಯಿತೆಂದು ಹೇಳಿದ್ದರೂ ಸರಿ, ಪ್ರದೀಪನು ಆ ಮಾತಿಗೆ ಆಶ್ಚರ್ಯನಾಗದೆ ಇದ್ದರೂ ಇರಬಹುದೆಂದು ನುಡಿಯುತ್ತಿದ್ದನು.

ಆದರೇ, ಶ್ರೀಕಂಠಯ್ಯನವರು ಆಡಿದ ಮಾತು ಆತನಿಗೆ ಮಿಗಿಲಾದ ಆಶ್ಚರ್ಯವನ್ನುಂಟುಮಾಡಿತು. ಅವನ ಶರೀರವನ್ನು ನೂರಾರು–ಸಾವಿರಾರು ಭರ್ಜಿಗಳಿಂದ ಇರಿದಂತೆ ಭಾಸವಾಯಿತು.

ತನ್ನ ಮಾವನವರೇನಾದರೂ ತನಗೆ ಹಾಸ್ಯಮಾಡುತ್ತಿರಬಹುದೇ ? ಹೇಗೆಂದು ಅವರ ಮುಖವನ್ನು ನೋಡಲು ಅವರ ಮುಖದಲ್ಲಿ ಹಾಸ್ಯಪ್ರವೃತ್ತಿ ಯೇನೂ ಕಾಣಲಿಲ್ಲ.

ಆ ವೇಳೆಯಲ್ಲಿ ಅವನ ಮನದಲ್ಲುಂಟಾದ ಯೋಚನಾಪರಂಪರೆಗೆ ಮೇರೆಯೇ ಇಲ್ಲವಾಯಿತು.

'ಒಂದು ಕಾಗದವನ್ನೂ ಬರೆಯಬಾರದೇ ? ಎಂದು ನನ್ನ ಮಾವನವರು ಹೇಳಿದರಲ್ಲ. ನಾನೇನು ಕಾಗದ ಬರೆಯಲಿಲ್ಲವೇ ? ನಾನು ಕಾಗದವನ್ನು ಬರೆದು ಬಾಳಪ್ಪನ ಅಂಗಡಿ ಜವಾನನಾದ ನಾರಾಯಣನ ಕೈಗೆ ಕೊಟ್ಟೆನು. ಆತನು ಟಪಾಲಿಗೆ ಹಾಕಲಿಲ್ಲವೇ ? ಆತನು ಹಾಕದಿರುವ ಉದ್ದೇಶವಾದರೂ ಏನಿದೆ ? ಅದರಿಂದ ಆತನಿಗೇನು ಪ್ರಯೋಜನ ? ಒಂದುವೇಳೆ ಆತನು ಹಾಕ ಲಿಲ್ಲವೆಂದೇ ಭಾವಿಸುವೆನು. ಹಾಗಾದರೇ ರೈಲ್ವೇ ನಿಲ್ದಾಣಕ್ಕೆ ಗಾಡಿಯನ್ನು ತಂದಿದ್ದ ಕೆಂಚನಾರಿರಬಹುದು ? ಈ ಮನೆಯ ವಿಷಯವನ್ನೆಲ್ಲಾ ಆತನು ನನ್ನೊಡನೆ ಹೇಳಿದನು. ಹಾಗಿದ್ದಮೇಲೆ ಆತನಾರಿರಬಹುದು ? ಕಾಗದವು ಬಂದಿತೆಂದೂ, ಅದಕ್ಕಾಗಿ ಧಣಿಗಳು ಗಾಡಿಯನ್ನು ಕಳುಹಿಸಿರುವರೆಂದೂ ಹೇಳಿದ ನಲ್ಲ. ಹಾಗೆ ಹೇಳುವ ಉದ್ದೇಶವೇನಿರಬಹುದು ? ನಾನು ಕಾಗದ ಬರೆದದ್ದೂ, ಇಲ್ಲಿಗೆ ಹೊರಟದ್ದೂ ಆತನಿಗೆ ತಿಳಿದ ಬಗೆ ಹೇಗೆ ? ಅದರಲ್ಲಿ ಏನೋ

ಕುತಂತ್ರವಿದೆ. ಮಾರ್ಗಮಧ್ಯದಲ್ಲಿ ಕಳ್ಳ ಗಿರೀಶನು ಅಡ್ಡಹಾಕಿದನಲ್ಲ, ಆತನು ನನಗಾಗಿ ಬಹುದಿನಗಳಿಂದ ಅಲ್ಲಿಯೇ ಕಾಯುತ್ತಿದ್ದನೇ ಹೇಗೆ? ನನಗೆ ಶಿಕ್ಷಿಸಿ ಕೆಂಚನಿಗೆ ಶಿಕ್ಷಿಸದೆ ಬಿಟ್ಟನೆಂದ ಬಳಿಕ ಅವರಿಬ್ಬರೂ ಒಂದೇ ಇರಬಹುದೇ? ಇದ್ದರೂ ಇರಬಹುದು. ಸೂಕ್ಷ್ಮವಾಗಿ ಪರ್ಯಾಲೋಚಿಸಿ ನೋಡಿದರೆ, ಗಿರೀಶನು ನನ್ನ ಮೇಲೆ ಸೇಡು ತೀರಿಸಿಕೊಳ್ಳಲು ಬಹುದಿನಗಳಿಂದಲೂ ನಿರೀಕ್ಷಿಸುತ್ತಿದ್ದನೆಂದು ತೋರುತ್ತದೆ. ಕೆಂಚನೂ ಅವನ ಕಡೆಯವನೇ. ಅವರಿಬ್ಬರೂ ಇಲ್ಲಿಯೇ ಇದ್ದು ಈ ಮನೆಯ ರಹಸ್ಯಗಳನ್ನೆಲ್ಲಾ ತಿಳಿದಿರುವರು. ನನಗೆ ಯಾವ ರೀತಿ ಶಿಕ್ಷೆ ವಿಧಿಸಬೇಕೆಂದು ದಿನವೂ ಯೋಚಿಸುತ್ತಿರಬಹುದು. ನಾನು ಇಲ್ಲಿಗೆ ಬರುವೆನೆಂದು ಬರೆದ ಕಾಗದವು ಹೇಗೋ ಅವರ ಕೈಗೆ ಸಿಕ್ಕಿದೆ. ಟಪಾಲಿನವನನ್ನು ಕಂಡು ತಾವು ಶ್ರೀಕಂಠಯ್ಯನ ಮನೆಯವರೆಂದು ಹೇಳಿ ಕಾಗದವನ್ನು ಪಡೆದಿರಬಹುದು. ಆ ಕಾಗದವನ್ನು ಓದಿ ನನ್ನ ಮೇಲೆ ಯಾವರೀತಿ ಸೇಡು ತೀರಿಸಿಕೊಳ್ಳಬೇಕೆಂಬುದನ್ನು ಯೋಚಿಸಿ, ಆ ರೀತಿ ನಡೆಸಿರುವರು. ಆ ರೀತಿ ನಡೆಸಲು ಬಹುದಿನಗಳ ಯೋಚನಾಪರಿಶ್ರಮವೇ ಕಾರಣವೆಂದು ತೋರುತ್ತದೆ. ಇಲ್ಲದೇಹೋದರೆ ಏಕಾಏಕಿ ಹೊಸಬರಿಂದ ಆ ರೀತಿ ಮಾಡಲು ಸಾಧ್ಯವಿಲ್ಲ. ಆದರೆ, ನಾನು ಇಲ್ಲಿಗೆ ಕಾಗದ ಬರೆಯುವುದು ಅವರಿಗೆ ಹೇಗೆ ತಿಳಿಯಿತು? ದಿನವೂ ಟಪಾಲಿನವನನ್ನು ಕಂಡು ವಿಚಾರಿಸುತ್ತಿರಬಹುದೇ? ಇರಬಹುದು. ಒಟ್ಟಿನಲ್ಲಿ ಅಲ್ಲಿ ನಡೆದ ವಿಷಯವು ಇಲ್ಲಿನವರಾರಿಗೂ ತಿಳಿಯದು. ತಿಳಿಯದಿರುವುದೇ ಉತ್ತಮ, ಏನಾದರೊಂದುವೇಳೆ ಇವರಿಗೆ ತಿಳಿದರೆ ನಾನು ಅವಮಾನಿತನಾಗುವುದು ಖಂಡಿತಾ. ಈಗ ಆ ವಿಷಯವಾವುದನ್ನೂ ಅರಿಯದವನಂತೆಯೇ ನಟಿಸಬೇಕು.'

—ಎಂಬುದಾಗಿ ಯೋಚಿಸಿಕೊಂಡನು.

ಶ್ರೀಕಂಠಯ್ಯನವರ ಪ್ರಶ್ನೆಗೆ ಉತ್ತರವೀಯುವ ಸಲುವಾಗಿ—

"ಏನೋ ಅಕಸ್ಮಾತ್ ಬರಬೇಕೆಂಬ ಉದ್ದೇಶವುಂಟಾಯಿತು. ಇದ್ದಕ್ಕಿದ್ದಹಾಗೆ ಹೊರಟುಬಿಟ್ಟೆ" ಎಂದನು.

ಶ್ರೀಕಂಠಯ್ಯನವರು ನಕ್ಕು ಸುಮ್ಮನಾದನು.

ಪ್ರದೀಪನು ಮಗನನ್ನು ನೋಡುವ ತವಕವುಳ್ಳವನಾಗಿ ಬಾಣಂತೀ ಮನೆಗೆ ಹೋಗಿ ಮಗನನ್ನೂ ಪತ್ನಿಯನ್ನೂ ನೋಡಿ ಆನಂದಪಟ್ಟನು.

ಆನಂದದ ಆವೇಶದಲ್ಲಿ ತಾನು ಗಿರೀಶನಿಂದ ಅವಮಾನಿತನಾದ ಘಟನೆಯನ್ನು ಮರೆಯಲಿಲ್ಲ.

ನಾಮಕರಣವು ಮಾರನೆಯ ದಿನವೇ ಇದ್ದುದರಿಂದ ಆ ದಿನ ಮಧ್ಯಾಹ್ನ ದಿಂದಲೇ ಮನೆಯವರೆಲ್ಲರೂ ಸಡಗರದ ಸಂಭ್ರಮದಲ್ಲಿದ್ದರು.

ಆದರೆ, ಆ ಸಂಭ್ರಮದ ಓಡಾಟದಲ್ಲಿ ಪ್ರದೀಪನನ್ನು ಮರೆಯಲಿಲ್ಲ. ಹೆಚ್ಚಿನ ಮುತುವರ್ಜಿವಹಿಸಿ ಉಪಚಾರ ಮಾಡಿದರು.

ಎಷ್ಟಾದರೂ ಮನೆ ಅಳಿಯನಲ್ಲವೇ ? ಮೇಲಾಗಿ ಇನ್ಸ್‌ಪೆಕ್ಟರ್ ಪದವಿ ಯಲ್ಲಿರುವನು. ಅದರ ಮೇಲೆ ಕೋಪಿಷ್ಟ. ಅಂತಹವನಿಗೆ ಉಪಚರಿಸ ದಿದ್ದರೆ ಹೇಗೆ ?

ಪ್ರದೀಪನಿಗೆ ಅವರ ಉಪಚಾರಗಳಾವುದೂ ಬೇಕಿರಲಿಲ್ಲ. ತನ್ನ ಮನೋ ವೇದನೆಯನ್ನು ಹೊರಗೆಡಹದೆ, ಹೃದಯದಲ್ಲಿಯೇ ಅಡಗಿಸಿಕೊಂಡು ಕೊರಗು ತ್ತಿದ್ದನು.

ಉಗ್ರಕೋಪಿಯಾದ ಪ್ರದೀಪನ ಯೋಗ್ಯತೆಯನ್ನು ಅವನ ಮಾವನ ಮನೆಯವರೆಲ್ಲರೂ ಅರಿತಿದ್ದ ಪ್ರಯುಕ್ತ ಯಾರೊಬ್ಬರೂ ಆತನೊಡನೆ ವಿನೋದ ಮಾಡಲು ಹೋಗಲಿಲ್ಲ.

ಹೆಚ್ಚು ಆಡಂಬರವಿಲ್ಲದೆಯೇ ಪ್ರದೀಪನ ಊಟವು ಮುಗಿಯಿತು.

ಆತನಿಗೆ ಮಲಗಿಕೊಳ್ಳಲು ಪ್ರತ್ಯೇಕ ರೂಮನ್ನು ಬಿಟ್ಟುಕೊಟ್ಟರು. ಆ ರೂಮು ಅಲಂಕಾರ ಸಜ್ಜಿತವಾಗಿ ಆತನಿಗೆ ಅನುಕೂಲವಾಗಿಯೇ ಇತ್ತು.

ಪ್ರದೀಪನು ರೂಮಿನೊಳಗೆ ಹೋಗಿ ಬಾಗಿಲು ಹಾಕಿಕೊಂಡನು.

ಚಿಂತೆಯೆಂಬ ಮನೋರೋಗವು ಆತನ ಹೃದಯವನ್ನಲಂಕರಿಸಿಕೊಂಡಿದ್ದ ಪ್ರಯುಕ್ತ ನಿದ್ರಾದೇವಿಯು ಅವನ ಬಳಿಗೆ ಸುಳಿಯಲಿಲ್ಲ. ಚಿಂತೆಯೆಂಬ ಆ ವ್ಯಾಧಿಯು ಅವನ ಹೃದಯವನ್ನು ದಹಿಸುತ್ತಿತ್ತು.

ಗಿರೀಶನಿಂದ ತಾನು ಅವಮಾನಿತನಾದ ಬಗೆಯಾಗಿಯೇ ಯೋಚಿಸುತ್ತಾ ಅಡಿಗಡಿಗೆ ನಿಟ್ಟುಸಿರುಬಿಡುತ್ತಿದ್ದನು.

ಯೋಚನೆಯಲ್ಲಿಯೇ ಮುಳುಗಿರಲು ಆತನಿಗೆ ಇನ್ನೊಂದು ಬಗೆಯ ಯೋಚನೆ ಹೊಳೆಯಿತು.

'ಆ ಗಿರೀಶ ಕೆಂಚರಿಬ್ಬರೂ ಪತ್ತೇದಾರರೇ ಇರಬಹುದೇ ? ಇಬ್ಬರೂ ಸೇರಿಕೊಂಡು ಆ ವೇಷದಲ್ಲಿ ನನಗೆ ಮೋಸಪಡಿಸಿರಬಹುದೇ ?........ಛೀ ! ಇರಲಾರದು. ಅವರು ಕಾಂಚೀನಗರದಿಂದ ಜಗದೀಶಪುರಕ್ಕೆ ಹೋಗುವುದೆಂದರೇನು ? ಅಲ್ಲಿಂದ ಇನ್ನೂರು ಮೈಲಿಗಳ ದೂರವಿರುವ ಈ ಊರಿಗೆ ಬರುವುದೆಂದರೇನು ? ಅವರು ಯಾವ ವೇಷವನ್ನು ಧರಿಸಿದರೂ, ನನಗೆ ಮೋಸ ಮಾಡಲು ಸಾಧ್ಯವಿಲ್ಲ. ಒಂದುವೇಳೆ ಅವರೇ ಆದರೇ ! ನಾನು ಬರೆದ ಕಾಗದವನ್ನು ನೋಡುವುದಾದರೂ ಹೇಗೆ ? ಅದೆಲ್ಲಾ ಅಸಂಭವ. ಗಿರೀಶನು ಕಳ್ಳನೇ ಸರಿ. ಹಿಂದೆ ಒಂದು ಸಾರಿ ನನ್ನಿಂದ ಹಿಡಿಯಲ್ಪಟ್ಟು ಶಿಕ್ಷೆಯನ್ನನುಭವಿಸಿರುವನು. ಆ ಶಿಕ್ಷೆಯನ್ನೂ ಸಹ ಹೇಳಿದನು. ಪುರುಷೋತ್ತಮನಿಗೆ ಆತನ ವಿಷಯವೇನು ಗೊತ್ತು ? ಒಟ್ಟನಲ್ಲಿ ಪತ್ತೆದಾರರಿಂದ ಈ ಕಾರ್ಯವಾಗಿಲ್ಲ. ಒಂದು ವೇಳೆ ಹಿಂದಿನಂತೆ ನನ್ನ ಹಿಂದೆಯೇ ಇದ್ದು, ಗಿರೀಶನು ನನಗೆ ಅವಮಾನ ಮಾಡಿ ಕೆಂಚನೊಡನೆ ಹಿಂತಿರುಗಿದಾಗ ಅವರನ್ನು ಹಿಡಿದಿದ್ದರೂ ಹಿಡಿದಿರಬಹುದು. ಅವರೇನಾದರೂ ಆ ರೀತಿ ಹಿಡಿದರೆ ನನಗೆ ಅವಮಾನವಾಗುವುದು ಖಂಡಿತಾ. ಇಲ್ಲದೇ ಹೋದರೆ ನನಗೇನೂ ಆಗಲಾರದು. ಗಿರೀಶನು ಅವರ ಬಳಿಯಲ್ಲಿ ಹೇಳುವುದಕ್ಕೆ ಹೋಗುವನೇ ? ಎಂದಿಗೂ ಇಲ್ಲ. ನನ್ನ ಮೇಲೆ ಸೇಡು ತೀರಿಸಿಕೊಳ್ಳಲು ಬಹು ದಿನಗಳಿಂದ ಕಾದು, ಕೊನೆಗೆ ತನ್ನ ಹಠವನ್ನು ನೆರವೇರಿಸಿಕೊಂಡ ಗಿರೀಶನನ್ನು ಮಾತ್ರ ಹಿಡಿಯದೆ ಬಿಡಲಾರೆನು. ಅವನಿಗಾಗಿ ನನ್ನ ಪ್ರಾಣಾಂತ್ಯದವರೆವಿಗೂ ಪ್ರಯತ್ನಿಸುವೆನು. ಅವನು ಜೀವಸಹಿತ ಎಲ್ಲಿದ್ದರೂ ಬಿಡಲಾರೆ. ಅವನನ್ನು ಹಿಡಿದು ಅವನ ಮೇಲೆ ದೊಡ್ಡ ಅಪರಾಧವನ್ನು ಹೊರಿಸಿ, ನಾಲ್ಕಾರು ವರ್ಷಗಳು ಜೈಲಿನಲ್ಲಿ ನರಳುವಂತೆ ಮಾಡುವೆನು. ಆದುದಾಗಲಿ."

ಎಂಬೀರೀತಿಯಾಗಿ ಯೋಚಿಸಿಕೊಂಡ ಪ್ರದೀಪನು ಮಂಚದ ಮೇಲೆ ಮಲಗಿಕೊಂಡನು.

ಆದರೂ ಅವನ ಮನದಲ್ಲಿ ಯೋಚನೆಯು ಕಡೆಯುತ್ತಲೇ ಇತ್ತು. ಅದಕ್ಕೆ ಬಿಡುಗಡೆಯೇ ಇಲ್ಲ.

'ಪುರುಷೋತ್ತಮನೊಡನೆ ಪ್ರತಿಜ್ಞೆ ಮಾಡಿದಲಾಗಾಯ್ತು ಈವರೆವಿಗೆ ಎರಡು ಸಾರಿ ಕಳ್ಳರಿಂದ ಅವಮಾನಿತನಾದೆನು. ಶೇಷಗಿರಿಯನ್ನು ಪುರುಷೋ

ತ್ತ್ರಮನು ಸೆರೆಹಿಡಿದನು. ಗಿರೀಶ ಮತ್ತು ಕೆಂಚರನ್ನು ದಸ್ತಗಿರಿ ಮಾಡಿರು ವನೋ ಇಲ್ಲವೋ ತಿಳಿಯದು. ಅವರು ನನಗೆ ಮೋಸಪಡಿಸುವುದಕ್ಕೇ ಆಗಲೀ, ನನ್ನ ಹಿಂದೆಯೇ ಆಗಲಿ ಇಷ್ಟು ದೂರ ಏಕೆ ಬರುವರು? ಅಥವಾ ಪತ್ತೇದಾ ರರೇ ಗಿರೀಶನನ್ನೂ, ಕೆಂಚನನ್ನೂ ಕಳುಹಿಸಿರಬಹುದೇ? ಅವರಿಂದ ವಿಷಯ ವನ್ನೆಲ್ಲಾ ಕೇಳಿ ಮುಂದೆ ತಾವೇ ಆ ರೀತಿ ಮಾಡಿದೆವೆಂದು ಹೇಳಿಕೊಳ್ಳ ಬಹುದೇ? ಆ ರೀತಿ ನಡೆದರೂ ನಡೆಯಬಹುದು. ಪ್ರದೀಪನಿಗೆ ವೇಷಾಂತರ ದಿಂದ ಮೋಸಗೊಳಿಸಲು ಸಾಧ್ಯವಾಗದೆಂದು ತಿಳಿದು ಗಿರೀಶನನ್ನೂ, ಕೆಂಚ ನನ್ನೂ ಕಳುಹಿಸಿರಬಹುದು. ಒಂದುವೇಳೆ ಪತ್ತೇದಾರರು ನಾವೇ ಗಿರೀಶ, ಕೆಂಚರೆಂದು ಹೇಳಿದರೆ, ಈ ಘಟನೆಯ ಪ್ರತಿಯೊಂದು ಸಣ್ಣ ವಿಷಯಗಳನ್ನೂ ಕೇಳಿ ತಿಳಿಯುವೆನು. ಆಗ ಅವರ ಮೋಸದ ಮರ್ಮವು ಬಯಲಾಗುತ್ತದೆ. ನಾನಾಗಿಯೇ ಆ ವಿಷಯವನ್ನು ಪ್ರಸ್ತಾಪ ಮಾಡುವುದಿಲ್ಲ. ಅವರಾಗಿಯೇ ಪ್ರಸ್ತಾಪ ಮಾಡಿದರೆ ಪರಿಶೋಧಿಸದೆ ಬಿಡುವುದಿಲ್ಲ.'

ಎಂಬುದಾಗಿ ದೃಢಪ್ರತಿಜ್ಞೆ ಮಾಡಿಕೊಂಡನು.

ಪ್ರದೀಪನು ಯೋಚನಾಸಾಗರದಲ್ಲಿ ಮುಳುಗಿ ನಿದ್ದೆಯಿಲ್ಲದೆ ಪರಿತಪಿಸು ತ್ತಿರಲು, ಶ್ರೀಕಂಠಯ್ಯನವರ ಮನೆಯವರು ಸಂತೋಷಸಾಗರದಲ್ಲಿ ಮುಳುಗಿ ನಾಮಕರಣ ಮಹೋತ್ಸವದ ವಿಶೇಷ ಸಡಗರದಲ್ಲಿದ್ದರು.

ಪ್ರದೀಪನ ಮನೋವೇದನೆಯ ಕಾರಣವನ್ನು ಅವರೇನು ಬಲ್ಲರು?

ಅಜ್ಜಿಗೆ ಅರಿವೆಯ ಕಾಟವಾಗಿದ್ದರೆ, ಮೊಮ್ಮಗಳಿಗೆ ಯಾರದೋ ಕಾಟ ವಾಗಿತ್ತಂತೆ.

ಮಗನು ಹುಟ್ಟಿದ ಸಂತೋಷದಲ್ಲಿ, ಮಾವನ ಮನೆಗೆ ಹೋಗಿ ತನ್ನ ದರ್ಪವನ್ನು ತೋರಿಸಬೇಕೆಂದಿರಲು, ಮಾರ್ಗಮಧ್ಯದಲ್ಲಿ ಕಳ್ಳನ ಕೈಗೆ ಸಿಕ್ಕಿ, ಇದ್ದುದೆಲ್ಲವನ್ನೂ ಕಳೆದುಕೊಂಡು, ಪ್ರಾಣವುಳಿಸಿಕೊಂಡು ಬಂದುದೇ ಹೆಚ್ಚಿನ ಮಾತಾಗಿ, ಆ ಬಗ್ಗೆ ಮನೋವೇದನೆಯನ್ನನುಭವಿಸಬೇಕಾಯಿತು.

ತನ್ನ ಮನೋವೇದನೆಯನ್ನು ಯಾರಲ್ಲಿಯೂ ಹೇಳಿಕೊಳ್ಳದ ಪ್ರಯುಕ್ತ, ಆತನ ಯೋಚನೆಯು ಇನ್ನೂ ಹೆಚ್ಚಾಯಿತೇ ವಿನಃ ಕಡಿಮೆಯಾಗಲಿಲ್ಲ.

ಮನೋವೇದನೆಗೆ ಮದ್ದೆಲ್ಲಿದೆ?

ಆ ಮನೋವೇದನೆಯು ದೂರಾಗಬೇಕಾದರೆ ತನಗೆ ತಾನೇ ಶಾಂತಿಯಾಗಬೇಕು. ಆತ್ಮವು ತೃಪ್ತಿಯಿಂದ ಕೂಡಿದ್ದರೆ, ಮನೋವೇದನೆಗೆ ಅವಕಾಶವಿರುವುದಿಲ್ಲ.

ಮಗನು ಹುಟ್ಟಿದ ಸಂತೋಷದಲ್ಲಿ ಅವನ ಮುಖವನ್ನು ನೋಡಿ ನಲಿಯಬೇಕೆಂಬ ಉತ್ಸಾಹದಿಂದ ಚಂಪಾಪುರಕ್ಕೆ ಬಂದಿದ್ದರೂ ಆ ಸಂತೋಷಕೂಟದಲ್ಲಿ ಭಾಗವಹಿಸುವ ಲಭ್ಯವಿಲ್ಲದಂತಾಯಿತು.

೧೨

ಮಾರನೆಯ ದಿನ ಶ್ರೀಕಂಠಯ್ಯನವರ ಮನೆಯ ಸಡಗರವನ್ನು ಹೇಳುವುದಕ್ಕಾಗದು.

ಅವರು ಆ ಹಳ್ಳಿಗೇ ದೊಡ್ಡ ಶ್ರೀಮಂತರಾದ ಪ್ರಯುಕ್ತ ಸಾಮಾನ್ಯವಾಗಿ ಎಲ್ಲರಿಗೂ ಆಹ್ವಾನವಿತ್ತಿದ್ದರು.

ಮನೆಗೆ ಬಂದ ಇತರ ತಮ್ಮ ಸ್ನೇಹಿತರಿಗೆ ಪ್ರದೀಪನ ಪರಿಚಯ ಮಾಡಿ ಕೊಡುತ್ತಿದ್ದರು.

ಪ್ರದೀಪನಿಗೆ ಅದಾವುದೂ ಬೇಕಿಲ್ಲವಾದರೂ ಬಲಾತ್ಕಾರವಾಗಿಯಾದರೂ ಸಮ್ಮತಿಸಬೇಕಿತ್ತು.

ಈ ಒಂದು ದಿನವನ್ನು ಕಳೆದು ಮಾರನೆಯ ದಿನವೇ ಜಗದೀಶಪುರಕ್ಕೆ ಹಿಂದಿರುಗಬೇಕೆಂದು ಸಂಕಲ್ಪಮಾಡಿಕೊಂಡನು.

ಶ್ರೀಕಂಠಯ್ಯನವರು ಬಂಧುಮಿತ್ರರಿಗೆ ವಿಶೇಷ ರೀತಿಯಲ್ಲಿ ಸತ್ಕರಿಸುತ್ತಿದ್ದರು.

ಪ್ರದೀಪನು ಮುಖದಲ್ಲಿ ಗಂಭೀರ ಮುದ್ರೆಯನ್ನು ತಾಳಿ, ಹೊರಗಡೆ ಕುರ್ಚಿಯಮೇಲೆ ಕುಳಿತಿದ್ದನು. ಈ ವೇಳೆಯಲ್ಲಿ ಚಿಂತಾಕ್ರಾಂತನಾಗಿ ಕುಳಿತಿರಬಾರದೆಂದೇ ಆತನ ಮನೋಭಿಪ್ರಾಯವಾಗಿತ್ತು.

ನಿಯಮಿತ ವೇಳೆಗೆ ಟಪಾಲಿನವನು ಬಂದು ಶ್ರೀಕಂಠಯ್ಯನವರ ಹೆಸರಿಗೆ ಬಂದಿದ್ದ ಕವರನ್ನಿತ್ತು ಹಿಂತಿರುಗಿದನು.

ಶ್ರೀಕಂಠಯ್ಯನವರು ಕವರನ್ನು ಹರಿದು ಒಳಗಡೆಯಿದ್ದ ಕಾಗದವನ್ನು ನೋಡಲು, ಪ್ರದೀಪನು ಮಗುವಿನ ನಾಮಕರಣಕ್ಕೆ ಬರುವೆನೆಂದು ಬರೆದ ಕಾಗದವಾಗಿದೆ.

ಕಾಗದವನ್ನು ಓದಿ ಶ್ರೀಕಂಠಯ್ಯನವರಿಗೆ ನಗು ಬಂದಿತು.

'ಪ್ರದೀಪನು ಮೊನ್ನೆಯ ದಿನ ರಾತ್ರಿ ಕಾಗದವನ್ನು ಬರೆದು ಟಪಾಲಿಗೆ ಹಾಕಿ ನೆನ್ನೆಯ ದಿನ ಬೆಳಿಗ್ಗೆ ಹೊರಟಿರುವನು. ಅಥವಾ ಮೊನ್ನೆಯ ದಿನ ಬೆಳಿಗ್ಗೆಯೇ ಬರೆದು ಟಪಾಲಿಗೆ ಹಾಕಲು ಯಾರ ಕೈಗೋ ಕೊಟ್ಟಿರಬಹುದು. ಅವರು ಮರೆತು ಆ ದಿನ ಹಾಕದೆ ನೆನ್ನೆಯ ದಿನ ಹಾಕಿರುವರು. ಇದೊಂದು ಸೋಜಿಗವೇ ಸರಿ. ಆದರೇ! ಪ್ರದೀಪನು ಕಾಗದದ ವಿಷಯವನ್ನೇ ಹೇಳ ಲಿಲ್ಲವಲ್ಲಾ? ಅದೇನಿರಬಹುದು? ಕಾಗದ ಬರೆದೂ 'ಏನೋ ಅಕಸ್ಮಾತ್ ಬರಬೇಕೆಂಬ ಉದ್ದೇಶವಾಯಿತು. ಇದ್ದಕ್ಕಿದ್ದ ಹಾಗೇ ಹೊರಟುಬಿಟ್ಟೆ'ನೆಂದು ಹೇಳಿದನಲ್ಲ. ಹಾಗೆ ಹೇಳಿದ ಅಭಿಪ್ರಾಯವಾದರೂ ಏನಿರಬಹುದು. ಏನೋ ನಾನು ಕೇಳಿದುದಕ್ಕೆ ಇವರಿಗೆ ಕಾಗದ ತಲುಪಿರಲಾರದೆಂದು ತಿಳಿದು ಆ ರೀತಿ ಹೇಳಿರಬಹುದು. ಆದರೇ! ಈ ಉಗ್ರಕೋಪಿ ಮನುಷ್ಯನು ಹತ್ತು ಮೈಲಿ ದೂರ ನಡೆದುಕೊಂಡು ಬಂದು, ಯಾರ ಮೇಲೂ ಕ್ರೋಧವನ್ನು ತೋರಿಸಿಕೊ ಳ್ಳದೆ ಮೌನನಾಗಿರುವುದು ನಮ್ಮ ಪುಣ್ಯವೇ ಸರಿ. ಮಗನು ಹುಟ್ಟಿದ ಸಂತೋಷ ದಲ್ಲಿ ಯಾರಮೇಲೂ ಕೋಪವನ್ನು ತೋರಿಸಿಕೊಂಡಿಲ್ಲ. ಏನೋ ಆಗಿ ಹೋಯಿತು. ಈಗ ಆ ವಿಷಯವಾಗಿ ಕೆಣಕುವುದು ಸರಿಯಲ್ಲ.'

ಎಂಬುದಾಗಿ ಭಾವಿಸಿಕೊಂಡರು.

ಕಾಗದವನ್ನು ಅಳಿಯನಿಗೆ ಕೊಡುವ ನಿಮಿತ್ತ ಅಲ್ಲಿಯೇ ನಿಂತಿದ್ದ ತಮ್ಮ ಆಳನ್ನು ಕರೆದು ಕಾಗದವನ್ನು ಆತನ ಕೈಗಿತ್ತು ಪ್ರದೀಪನಿಗೆ ಕೊಡುವಂತೆ ಹೇಳಿ ದರು.

ಆ ಸೇವಕನು ಪ್ರದೀಪನಲ್ಲಿಗೆ ಬಂದು ಕಾಗದವನ್ನು ಆತನ ಕೈಗಿತ್ತು ಅಲ್ಲಿಯೇ ನಿಂತನು.

ಪ್ರದೀಪನು ಕಾಗದವನ್ನು ನೋಡುತ್ತಲೇ ತನ್ನನ್ನು ತಾನೇ ನಂಬದೆ ಹೋದನು. ಅವನು ಹಿಂದಿನ ದಿನ ಮಾಡಿದ್ದ ಯೋಚನೆಗಳೆಲ್ಲವೂ ತಲೆ ಕೆಳಗಾದುವು.

ಕಾಗದವು ಹಿಂದೆಯೇ ಬಂದಿರಬಹುದು, ತನ್ನ ಮಾವನವರು ಬೇಕೆಂದೇ ಆ ರೀತಿ ಹೇಳಿರಬಹುದೆಂಬ ಅಭಿಪ್ರಾಯವುಳ್ಳವನಾಗಿ ಟಪಾಲು ಮುದ್ರೆ ಯನ್ನು ನೋಡಲು ಆ ದಿನವೇ ಚಂಪಾಪುರಕ್ಕೆ ಬಂದುದಾಗಿತ್ತು.

ಜಗದೀಶಪುರದ ಟಪಾಲು ಮುದ್ರೆಯನ್ನು ನೋಡಲು ಹಿಂದಿನ ದಿನದ ತಾರೀಕಿತ್ತು.

ಪ್ರದೀಪನ ಶರೀರವನ್ನು ಸಾವಿರಾರು ಚೇಳುಗಳು ಕಚ್ಚಿದಂತಾಯಿತು.

'ಕಾಗದವು ನಾನು ಇಲ್ಲಿಗೆ ಬಂದ ಮೇಲೆ ಬರುವ ಕಾರಣವೇನಿರಬಹುದು? ಆ ದಿನ ನಾರಾಯಣನ ಕೈಗೆ ಕಾಗದವನ್ನು ಕೊಟ್ಟೆನು. ಆತನು ಟಪಾಲ್ ಕಛೇರಿಗೆ ಹಾಕಲಿಲ್ಲವೇ? ಹಾಗೆ ಹಾಕದಿರುವ ಕಾರಣವಾದರೂ ಏನಿದೆ? ಅದರಿಂದ ಆತನಿಗೇನು ಪ್ರಯೋಜನ? ಆ ದಿನ ಹಾಕದೆ ನೆನ್ನೆಯ ದಿನ ಟಪಾಲು ಪೆಟ್ಟಿಗೆಗೆ ಹಾಕಿರಬಹುದೇ? ಆ ದಿನ ಟಪಾಲು ಕಛೇರಿಗೇ ಹೊರಟಿದ್ದನು. ಹಾಗಿರುವಾಗ ಈ ಕವರನ್ನು ಹಾಕಲಿಲ್ಲವೆಂದರೆ ಅಶ್ಚರ್ಯವಲ್ಲವೇ? ಆ ದಿನ ಮರೆತು ನೆನ್ನೆಯ ದಿನ ಹಾಕಿದನೆಂಬುದಕ್ಕೆ ಯಾವ ಕಾರಣವೂ ಇಲ್ಲ. ಟಪಾಲು ಪೆಟ್ಟಿಗೆಯ ಮೂಲೆಯಲ್ಲೆಲ್ಲೋ ಸಿಕ್ಕಿಕೊಂಡಿರಬಹುದು. ನೆನ್ನೆಯ ದಿನ ಅವರ ಕಣ್ಣಿಗೆ ಕಂಡಿರಬಹುದು. ಬೇರೇನೂ ವ್ಯತ್ಯಾಸವಾಗಿ ನಡೆದಿಲ್ಲ. ಆದರೇ, ಕೆಂಚನು ನಿಲ್ದಾಣಕ್ಕೆ ಗಾಡಿಯನ್ನು ಹೇಗೆ ತೆಗೆದುಕೊಂಡು ಬಂದನು? ನಾನು ಬರೆದ ಕಾಗದದ ವಿವರವು ಅತನಿಗೆ ತಿಳಿದ ಬಗೆ ಹೇಗೆ? ನಾನು ಕಾಗದ ಬರೆಯುವಾಗ ಅಲ್ಲಿ ಯಾರೂ ಇರಲಿಲ್ಲ. ಟಪಾಲು ಕಛೇರಿಗೆ ಹೊರಟಿದ್ದ ನಾರಾಯಣನ ಕೈಗೆ ಇದನ್ನು ಕೊಟ್ಟೆನು. ಆತನು ಆ ದಿನ ಹಾಕಲಿಲ್ಲವೇ? ತಪ್ಪಿದರೆ ಈ ಕೆಂಚ, ಗಿರೀಶರು ವೇಷಾಂತರದಿಂದ ಅಲ್ಲಿಯೇ ತಿರುಗಾಡಿಕೊಂಡು, ನಾನು ನಾರಾಯಣನ ಕೈಗೆ ಕವರನ್ನು ಕೊಟ್ಟಿದ್ದನ್ನು ನೋಡಿ, ಆತನು ಕಣ್ಮರೆಯಾದನಂತರ ಅವನಿಗೆ ಹಣದಾಸೆಯನ್ನು ತೋರಿಸಿ, ಕವರನ್ನು ತೆಗೆದುಕೊಂಡಿರಬಹುದೇ? ಇದ್ದರೂ ಇರಬಹುದು. ಇಲ್ಲದೇ ಹೋದರೆ ಆ ರೀತಿ ನಟನೆ ಮಾಡಲು ಸಾಧ್ಯವೇ ಇಲ್ಲ. ಕಾಗದವನ್ನು ಓದಿನೋಡಿಕೊಂಡು ನನ್ನ ಮೇಲೆ ಯಾವ ರೀತಿ ಸೇಡು ತೀರಿಸಿಕೊಳ್ಳಬೇಕೆಂದು ಯೋಚಿಸಿ ಆ ರೀತಿ ನಡೆಸಿರುವರು. ಕಾಗದದ ಬಗ್ಗೆಯೂ ಅನುಮಾನವಾಗಬಾರದೆಂಬುದಾಗಿ ಯೋಚಿಸಿ ಯಾವುದೋ ಒಂದು ಬಗೆಯಲ್ಲಿ ಜಗದೀಶಪುರದಿಂದಲೇ ಇಲ್ಲಿಗೆ ತಲುಪುವಂತೆ ಮಾಡಿರುವರು. ಅಲ್ಲಿಗೆ ಅವರು ಈ ಮನೆಯ ಗುಟ್ಟನ್ನೂ ಸಹ ತಿಳಿದಿರುವರು. ಸಂದೇಹವಿಲ್ಲ. ಊರಿಗೆ ಹಿಂದಿರುಗಿದನಂತರ ನಾರಾಯಣನನ್ನು ವಿಚಾರಿಸುವೆನು. ಆತನು ಲಂಚ

ಕ್ಕೊಳಗಾಗಿ ಕವರನ್ನು ಕೊಟ್ಟನೆಂದು ತಿಳಿದುಬಂದರೆ ಕಠಿಣ ಶಿಕ್ಷೆಗೆ ಗುರಿ ಮಾಡುವೆನು. ಮೊದಲು ಇಲ್ಲಿ ಕೆಂಚನೆಂಬುವನು ಯಾರೆಂಬುದನ್ನು ಕೇಳಿ ತಿಳಿಯಬೇಕಾಗಿದೆ.'

ಎಂಬೀರೀತಿಯಾಗಿ ಯೋಚಿಸಿಕೊಂಡನು.

ಕವರನ್ನು ತಂದಿತ್ತ ಸೇವಕನು ಅಲ್ಲಿಯೇ ನಿಂತಿದ್ದುದರಿಂದ ಕೆಂಚನಾರೆಂಬುದನ್ನು ತಿಳಿಯುವ ಅಭಿಪ್ರಾಯವುಳ್ಳವನಾಗಿ ತಲೆಯೆತ್ತಿ ಆತನ ಮುಖವನ್ನು ನೋಡಿದನು.

ಆ ಸೇವಕನು ಕೂಡಲೇ—

"ಏನ್ಸಾಮಿ! ಎಲ್ಡ್‌ದಿನ ಮೊದ್ಲೇ ಕಾಗ್ದ ಬರೀಬಾರ್ದಿತ್ತ. ಗಾಡಿ ತರ್ತಿದ್ನಲ್ಲ ಬುದ್ಧಿ. ಹತ್ರ್ಯಾಲಿ ನಡ್ಕಂಬಂದ್ರಲ್ಲ. ತಮ್ಕಾಲೀಗ್ ನೋವಾಗ್ಲಿಲ್ವಾ?" ಎಂದು ಕೇಳಿದನು.

ಪ್ರದೀಪನು ಸೋಜಿಗನಾದನು. ಈತನು ಕೆಂಚನೇ ಇರಬಹುದೆಂಬ ಅಭಿಪ್ರಾಯವುಳ್ಳವನಾಗಿ—

"ನಿನ್ನ ಹೆಸರೇನು?" ಎಂದು ಕೇಳಿದನು.

"ಏನ್ಬುದ್ಧಿ ಇಂಕೇಳ್ತೀರಾ? ನನ್ ಪರಿಚಯ್‌ವಿಲ್ವ ನಿಮ್ಗೆ?"

"ಅದೆಲ್ಲಾ ಇರಲಿ. ನಿನ್ನ ಹೆಸರೇನು ಹೇಳು?"

"ನನ್ಹೆಸ್ರು ಕೆಂಚ ಬುದ್ಧಿ."

ತನ್ನ ಊಹೆಯು ನಿಜವಾಯಿತೆಂದುಕೊಂಡ ಪ್ರದೀಪನು ಕೆಂಚನ ಮುಖವನ್ನು ನೋಡಿದನು. ಆ ಕೆಂಚನ ಮುಖಕ್ಕೂ, ಈ ಕೆಂಚನ ಮುಖಕ್ಕೂ ಕೊಂಚ ವ್ಯತ್ಯಾಸವಿದ್ದರೂ, ತನ್ನನ್ನು ಈ ಕೆಂಚನ ವೇಷದಲ್ಲಿ ಮೋಸಪಡಿಸಿದುದನ್ನು ನೆನೆದು ಆಶ್ಚರ್ಯಭರಿತನಾದನು.

ಮುಖಗಳಲ್ಲಿ ವ್ಯತ್ಯಾಸವಿದ್ದರೂ ಮಾತನಾಡುವುದು ಮಾತ್ರ ಒಂದೇ ಬಗೆ.

ವೇಷಧಾರಿ ಕೆಂಚನು ಇಲ್ಲಿ ಕೆಲವು ದಿನಗಳಿದ್ದು ಈತನ ನಡವಳಿಕೆಯನ್ನು ತಿಳಿದು ಅದರಂತೆ ನಟನೆ ಮಾಡಿರುವನೆಂದುಕೊಂಡನು.

ಆದರೇ, ಆತನು ಕೆಂಚನ ನಡವಳಿಕೆಯನ್ನು ಕಲಿತುದೇನೋ ನಿಜ. ತನ್ನನ್ನು ಕರೆದುಕೊಂಡು ಬರಲು ಈತನೇ ಗಾಡಿಯನ್ನು ತೆಗೆದುಕೊಂಡು

ಬರುವನೆಂದು ಆತನಿಗೇನು ಗೊತ್ತು ? ಬಹುಶಃ ಆ ವಿಷಯವನ್ನೂ ಸಹ ಕೇಳಿ ತಿಳಿದುಕೊಂಡಿರಬಹುದೆಂಬ ಯೋಚನೆಯು ಪ್ರದೀಪನ ಮನಕ್ಕೆ ಹೊಳೆಯಿತು.

ಯಾವ ರೀತಿ ಯೋಚಿಸಿ ಹೀಗೆಯೇ ನಡೆದಿದೆಯೆಂದು ತಿಳಿದರೂ ಪ್ರದೀಪನ ಮನಸ್ಸಿಗೆ ಶಾಂತಿ ಲಭಿಸಲಿಲ್ಲ.

ಯೋಚನೆಯ ಮಹಾ ಪ್ರವಾಹವೇ ಅವನ ತಲೆಯಲ್ಲಿ ಸೇರಿಕೊಂಡು, ಸುರುಳಿಸುರುಳಿಯಾಗಿ ಸುತ್ತುತ್ತಾ, ಹೊರಗೆ ಬಾರದೆ ಇನ್ನೂ ಹೆಚ್ಚಿನ ಚಿಂತೆಗೆ ಅವಕಾಶವಾಡಿತ್ತು.

ಮನೆಯಲ್ಲಿ ಸಡಗರವು ವಿಶೇಷ ಜೋರಾಗಿಯೇ ನಡೆಯುತ್ತಿತ್ತು.

ಮನೆಮಂದಿಮಕ್ಕಳೆಲ್ಲಾ ಸಂತೋಷದಿಂದ ನಲಿನಲಿದಾಡುತ್ತಿದ್ದರೂ, ಮನೆ ಅಳಿಯನು ಮನೋವೇದನೆಯನ್ನನುಭವಿಸುವ ಪ್ರಮೇಯವೊದಗಿದೆ.

ತಮ್ಮ ಅಳಿಯನು ಹಿಂದೆ ಇಲ್ಲಿಗೆ ಬಂದಿದ್ದಾಗ ತನ್ನ ಸಡಗರ, ದರ್ಪ, ಕೆಚ್ಚೆದೆಯ ಮಾತಿನಿಂದ ಇಲ್ಲಿನವರೆಲ್ಲರನ್ನೂ ಬೆರಗುಗೊಳಿಸಿದ್ದನು. ಈ ಸಾರಿ ಈತನೇ ಬೆರಗಾಗಿ ಕುಳಿತುಬಿಟ್ಟಿರುವನು. ಕಾರ್ಯದಲ್ಲಿ ಗೆಲುವಿಲ್ಲ, ಮುಖದಲ್ಲಿ ಕಳೆಯಿಲ್ಲ. ಏನೋ ಒಂದು ಬಗೆಯ ಚಿಂತೆಯು ಆವರಿಸಿಕೊಂಡಿರಬಹುದು. ಈಗ ಆ ವಿಷಯವಾಗಿ ಪ್ರಸ್ತಾಪ ಮಾಡುವುದು ಸರಿಯಲ್ಲ. ನಾಳೆಯ ದಿನ ವಿಚಾರಿಸಿದರಾಯಿತೆಂದು ಶ್ರೀಕಂಠಯ್ಯನವರು ಯೋಚಿಸಿಕೊಂಡರು.

ಅವರ ಪತ್ನಿಯಾದ ಲಕ್ಷ್ಮಮ್ಮನೂ ಸಹ ತಮ್ಮ ಅಳಿಯನು ಸಪ್ಪಗಿರುವುದನ್ನು ಕಂಡು, ಆತನಿಗೇನೋ ಕಷ್ಟ ಬಂದಿರಬಹುದೆಂದುಕೊಂಡರು.

ನಾಮಕರಣ ಮಹೋತ್ಸವದ ಕಾರ್ಯಕಲಾಪಗಳೆಲ್ಲವೂ ವಿಶೇಷ ವೈಭವದಿಂದಲೇ ಮುಗಿಯಿತು.

ಬಂಧುಮಿತ್ರರೆಲ್ಲರೂ ವಿಶೇಷ ರೀತಿಯಲ್ಲಿ ಸತ್ಕರಿಸಲ್ಪಟ್ಟು, ಆನಂದಭರಿತರಾದರು.

ಪ್ರದೀಪನು ಮೇರೆಯಿಲ್ಲದ ಯೋಚನೆಯಲ್ಲಿಯೇ ಆ ರಾತ್ರಿಯನ್ನು ಕಳೆದು ಯಾರು ಕೇಳಿದರೂ ನಿಲ್ಲದೆ ಮಾರನೆಯ ದಿನವೇ ಜಗದೀಶಪುರಕ್ಕೆ ಹಿಂದಿರುಗಿದನು.

ಶ್ರೀಕಂಠಯ್ಯನವರ ಮನೆಯವರೆಲ್ಲರಿಗೂ ಪ್ರದೀಪನ ವರ್ತನೆಯನ್ನು ನೋಡಿ ಆಶ್ಚರ್ಯವಾಯಿತು.

ಅಕಸ್ಮಾತ್ತಾಗಿ ಬಂದು ಒಂದು ದಿನ ಮಾತ್ರವಿದ್ದು, ಮಾರನೆಯ ದಿನವೇ ಹಿಂದಿರುಗಿದ ಕಾರಣವನ್ನು ಅವರಿಂದ ಅರಿಯಲಾಗಲಿಲ್ಲ.

* * * *

ಜಗದೀಶಪುರವನ್ನು ತಲುಪಿದ ಪ್ರದೀಪನು ಮೊದಲು ನಾರಾಯಣನನ್ನು ನೋಡಬೇಕೆಂದುಕೊಂಡನು.

ತಾನು ಪೋಲೀಸ್ ಠಾಣೆಯಲ್ಲಿ ಕುಳಿತುಕೊಂಡು ಯಾಮಿಕನನ್ನು ಕರೆದು, ಬಳೇ ಅಂಗಡಿ ಬಾಳಪ್ಪನ ಅಂಗಡಿಗೆ ಹೋಗಿ, ಆ ಅಂಗಡಿಯ ಸೇವಕನಾದ ನಾರಾಯಣನನ್ನು ಕರೆನುಕೊಂಡು ಬರುವಂತೆ ಹೇಳಿಕಳುಹಿಸಿದನು.

ಇಷ್ಟು ಅನರ್ಥಗಳಿಗೆ ಕಾರಣ, ತಾನು ನಾರಾಯಣನ ಕೈಗೆ ಕವರನ್ನು ಕೊಟ್ಟದ್ದೇ ಮೂಲವೆಂದುಕೊಂಡು, ಆತನಿಗೆ ಶಿಕ್ಷೆ ವಿಧಿಸದೆ ಬಿಡಬಾರದೆಂದುಕೊಂಡು ಆತನು ಬರುವುದನ್ನೇ ನಿರೀಕ್ಷಿಸುತ್ತಿದ್ದನು.

ಕೆಲಹೊತ್ತಿನಲ್ಲಿಯೇ ಯಾಮಿಕನು ನಾರಾಯಣನನ್ನು ಕರೆದುಕೊಂಡು ಬಂದನು.

ಪ್ರದೀಪನು ತಾನು ಶ್ರೀಕಂಠಯ್ಯನವರಿಗೆ ಕಾಗದ ಬರೆದ ತಾರೀಖು, ವಾರವನ್ನು ಜ್ಞಾಪಿಸಿಕೊಂಡು—

"ನೀನು ತಾ............ನೇ ಶುಕ್ರವಾರ ಮಧ್ಯಾಹ್ನ ಹನ್ನೊಂದು ಘಂಟೆಯ ವೇಳೆಯಲ್ಲಿ, ಕಾಗದಗಳನ್ನೂ, ಕವರುಗಳನ್ನೂ ತೆಗೆದುಕೊಂಡು ಟಪಾಲು ಕಛೇರಿಗೆ ಹೋಗಲು ನನ್ನ ಮನೆಯ ಮುಂದೆಯೇ ಹೊರಟಿದ್ದೆಯಲ್ಲವೇ ?" ಎಂದು ಕೇಳಿದನು.

ಸೋಜಿಗನಾದ ನಾರಾಯಣನು—

"ಇದೇನು ಸಾರ್, ಹೀಗೆ ಹೇಳುವಿರಿ ? ನಾನು ಆ ದಿನ ಊರಿನಲ್ಲಿಯೇ ಇರಲಿಲ್ಲ" ಎಂದನು.

ನಾರಾಯಣನ ಮಾತನ್ನು ಕೇಳುತ್ತಲೇ ಕೋಟಿ ಸಿಡಿಲುಗಳು ಒಂದೇ ಸಾರಿಗೆ ಸಿಡಿದು ತನ್ನ ಮೈಯನ್ನು ಪ್ರವೇಶಿಸಿದಂತಾಯಿತು, ಪ್ರದೀಪನಿಗೆ.

"ನೀನು ನಿಜವಾಗಿಯೂ ಈ ಊರಿನಲ್ಲಿರಲಿಲ್ಲವೇ ?"

"ಇಲ್ಲಾ, ಸಾರ್. ಬೇಕಾದರೆ ಬಾಳಪ್ಪನವರನ್ನೇ ಕೇಳಿ."

"ಎಲ್ಲಿಗೆ ಹೋಗಿದ್ದೆ ?"

"ಮಹದೇವಪುರಕ್ಕೆ ಹೋಗಿದ್ದೆ."

"ಏಕೆ ?"

"ಹಣ ವಸೂಲಿಗೆ."

"ಯಾರ ಹಣ ?"

"ಅಂಗಡಿಯ ಬಾಕಿ ಹಣ."

"ಬಾಳಪ್ಪನವರೇ ಕಳುಹಿಸಿಕೊಟ್ಟಿದ್ದರೇ ?"

"ಹೌದು."

"ಎಂದು ಹೋಗಿದ್ದೆ ?"

"ನಾನು ಗುರುವಾರವೇ ಇಲ್ಲಿಂದ ಹೊರಟುಹೋಗಿದ್ದೆ."

"ಪುನಃ ಹಿಂದಿರುಗಿ ಬಂದುದು ಯಾವಾಗ ?"

"ನೆನ್ನೆಯ ದಿನ ಬೆಳಗ್ಗೆ."

"ಮಹದೇವಪುರವು ಎಷ್ಟು ಮೈಲಿಗಳ ದೂರದಲ್ಲಿದೆ ?"

"ನೂರೈವತ್ತು ಮೈಲಿಗಳ ದೂರದಲ್ಲಿದೆ."

"ಬಾಕಿ ವಸೂಲಿಗೆ ಹೋದವನು ಹಿಂದಿರುಗಿ ಬರಲು ಅಷ್ಟು ದಿನ ತಡವೇಕೆ ?"

"ನನ್ನ ನೆಂಟರೊಬ್ಬರು ಅಲ್ಲಿಯೇ ಇರುವರು. ಅವರು ಬಲತ್ಕಾರವಾಗಿ ಉಳಿಸಿಕೊಂಡ ಪ್ರಯುಕ್ತ ಅಷ್ಟು ದಿನ ತಡವಾಯಿತು."

ನಾರಾಯಣನ ಪ್ರತಿಯೊಂದು ಮಾತಿನಲ್ಲಿಯೂ ಸತ್ಯಾಂಶವಿರುವುದಾಗಿ ಪ್ರದೀಪನ ಮನಕ್ಕೆ ಹೊಳೆಯಿತು.

ನಾರಾಯಣನೊಡನೆ ಹೆಚ್ಚು ಮಾತನಾಡಬೇಕಾದ ಪ್ರಮೇಯವಿರಲಿಲ್ಲ. ಪರಿಶೋಧಿಸುವ ಸಲುವಾಗಿ ಬಾಳಪ್ಪನೊಡನೆ ಕೇಳಬೇಕಾದ ಪ್ರಮೇಯವೂ ಇರಲಿಲ್ಲ.

ಆದರೆ ನಾರಾಯಣನ ವೇಷದಲ್ಲಿ ಬಂದವನಾರಿರಬಹುದು ?

ನಾರಾಯಣನಿಗೆ ಹಿಂದಿರುಗುವಂತೆ ಹೇಳಲು, ಆತನು ಪ್ರತಿಮಾತ ನಾಡದೆ ಹಿಂದಿರುಗಿದನು.

ನಾರಾಯಣದೇ ತಪ್ಪು, ಆತನೇ ಇಷ್ಟು ಅನರ್ಥಗಳಿಗೆ ಕಾರಣ, ಆತನಿಗೆ ಶಿಕ್ಷೆ ವಿಧಿಸದೆ ಬಿಡಬಾರದೆಂದು ಯೋಚಿಸಿಕೊಂಡಿದ್ದ ಪ್ರದೀಪನ ಯೋಚನೆಯು ಅವನಿಗೇ ವಿರುದ್ಧವಾಯಿತು.

ನಾರಾಯಣನ ಕೈಗೇ ಕವರನ್ನಿತ್ತೆನೋ ತಪ್ಪಿದರೆ ಅವನಂತೆಯೇ ಇದ್ದ ಬೇರೆ ಯಾರ ಕೈಗಾದರೂ ಕವರನ್ನಿತ್ತೆನೋ ಎಂಬುದನ್ನು ಪ್ರದೀಪನು ನಿರ್ಧರಿಸಲಾರದವನಾದನು.

ಒಂದುವೇಳೆ ಬೇರೆಯವರ ಕೈಗೆ ಕೊಟ್ಟರೂ, ಅವರಿಗೆ ಆ ಕವರನ್ನು ಟಪಾಲು ಪೆಟ್ಟಿಗೆಗೆ ಹಾಕದಿರುವ ಉದ್ದೇಶವಾದರೂ ಏನಿರಬಹುದೆಂಬುದನ್ನೂ ತೀರ್ಮಾನಿಸಲಾರದವನಾದನು.

ಬಹುಶಃ ಗಿರೀಶ, ಕೆಂಚರೇ ಸೇರಿ ಆ ಕಾರ್ಯವನ್ನು ಮಾಡಿರಬಹುದೆಂದು ನಿರ್ಧರಿಸಿಕೊಂಡನಾದರೂ, ಅವರಿಗೆ ತಾನು ಕಾಗದ ಬರೆಯುವುದು ತಿಳಿದ ಬಗೆಯಾದರೂ ಹೇಗೆಂಬ ವಿಚಾರವನ್ನು ಬಗೆಹರಿಸಿಕೊಳ್ಳಲಾರದವನಾದನು.

ಪ್ರದೀಪನು ಯೋಚಿಸಿ ನಿರ್ಧರಿಸಿಕೊಂಡ ಪ್ರತಿಯೊಂದು ಯೋಚನೆಯೂ ಅವನಿಗೆ ವಿರುದ್ಧವಾಗಿಯೇ ಇದ್ದಿತಾದ್ದರಿಂದ ಆತನು ಮುಂಗಾಣದವನಂತಾದನು.

ಯಾವ ಬಗೆಯಲ್ಲಿ ಯೋಚಿಸಿದರೂ, ಹೀಗೆಯೇ ನಡೆದಿರಬಹುದೆಂಬುದನ್ನು ಇತ್ಯರ್ಥಮಾಡಲಾರದವನಾಗಿ ಹುಚ್ಚನಂತಾದನು.

ನಾರಾಯಣನ ವಿಷಯವಾಗಿ ಸಂದೇಹನಿವೃತ್ತಿಯಾಗಿದ್ದರೂ ಬಾಳಪ್ಪನವರೊಡನೆ ಕೇಳಿ ತಿಳಿಯುವ ಅಭಿಲಾಷೆಯುಳ್ಳವನಾಗಿ ಫೋನಿನಲ್ಲಿ ಬಾಳಪ್ಪನವರೊಡನೆ ಮಾತನಾಡಲು ಅವನ ಆ ಅನುಮಾನವೂ ದೂರವಾಯಿತು.

ಇನ್ನು ಉಳಿದಿರುವುದೊಂದೇ ದಾರಿ.

ನಡೆದ ಘಟನೆಯೆಲ್ಲವನ್ನೂ ಮರೆತು ಮೌನವಾಗಿ ಕುಳಿತುಕೊಳ್ಳುವುದು, ಮತ್ತು ಆ ಘಟನೆಯನ್ನು ಯಾರೊಡನೆಯೂ ಹೇಳದಿರುವುದು.

ತನ್ನ ವಿನಃ ಬೇರೆ ಯಾರಿಗೂ ಆ ವಿಷಯವು ತಿಳಿಯದ ಪ್ರಯುಕ್ತ, ಯಾರಲ್ಲಿಯೂ ತಿಳಿಸದಿರುವುದೇ ಕ್ಷೇಮವೆಂದುಕೊಂಡ ಪ್ರದೀಪನು ಆ ವಿಷಯ

ವನ್ನು ಮರೆಯುವುದೇ ಉತ್ತಮವೆಂದುಕೊಂಡನಲ್ಲದೆ, ಗಿರೀಶನನ್ನೂ, ಕೆಂಚನನ್ನೂ ಯಾವರೀತಿಯಿಂದಲಾದರೂ ಹಿಡಿಯದೆ ಬಿಡಬಾರದೆಂದುಕೊಂಡನು.

ಆದರೇ ! ಗಿರೀಶ, ಕೆಂಚನನ್ನು ಹಿಡಿಯುವ ಮಾರ್ಗವಾದರೂ ಹೇಗೆ ? ಈಗ ಅವರೆಲ್ಲಿರುವರು ? ಏನು ಕೆಲಸದಲ್ಲಿರುವರೆಂದು ಪ್ರದೀಪನಿಗೇನುಗೊತ್ತು ?

ಎರಡುಸಾರಿ ಕಳ್ಳರಿಂದ ಅವಮಾನಿತನಾದ ಪ್ರಯುಕ್ತ ಪ್ರದೀಪನು ತನ್ನ ಕೆಲಸಕಾರ್ಯಗಳಲ್ಲಿ ಹಿಂದಿನಂತೆ ಹೆಚ್ಚು ಆಸಕ್ತಿಯನ್ನು ತೋರಿಸಲಿಲ್ಲ.

ಒಬ್ಬ ಕಳ್ಳನಿಂದ ಮಂಚಕ್ಕೆ ಬಿಗಿಸಿಕೊಂಡಿದ್ದರೆ, ಮತ್ತೊಬ್ಬ ಕಳ್ಳನಿಂದ ಮರಕ್ಕೆ ಬಿಗಿಸಿಕೊಂಡಿದ್ದನು.

ಆ ಅವಮಾನವು ಎಂದೆಂದಿಗೂ ಮರೆಯಲಾರದಂತಹ ಘಟನೆಯಾಗಿತ್ತು. ಅವನ ಹೃತ್ಪಟಲದಲ್ಲಿ ನೆಲೆಯಾಗಿ ನಿಂತು ಮನೋವೇದನೆಗೆ ಗುರಿ ಮಾಡಿದ್ದಿತು.

ಮಾನವಮಾತ್ರದವರಲ್ಲಿ ಯಾರೇ ಆಗಲಿ, ಸಾಮಾನ್ಯವಾಗಿ ತಾವು ಎಲ್ಲಿಯೇ ಆಗಲಿ, ಹೊಡೆದಾಟ, ಕುಸ್ತಿ ಮತ್ತು ಇತರ ಪಂದ್ಯಗಳಲ್ಲಿ ಗೆದ್ದುಬಂದರೆ ಎಲ್ಲರೊಡನೆಯೂ ಹೇಳಿಕೊಂಡು, ಹೆಮ್ಮೆ ಪಟ್ಟುಕೊಳ್ಳುವರು. ಸೋತು ಬಂದರೆ ಆ ವಿಷಯವನ್ನು ಯಾರೊಡನೆಯೂ ಹೇಳಿಕೊಳ್ಳುವುದಿಲ್ಲ. ಅಕಸ್ಮಾತ್ ಯಾರಾದರೂ ಆ ವಿಷಯವಾಗಿ ಪ್ರಸ್ತಾಪ ಮಾಡಿದರೆ ವಿನೋದವಾಗಿ, ತೇಲಿಸಿ ಮಾತನಾಡುವರಲ್ಲದೆ ಬೇರೊಂದು ಪ್ರಸ್ತಾಪವನ್ನೆತ್ತಿ ಆ ವಿಷಯವನ್ನೇ ಮರೆಯಿಸಲು ಪ್ರಯತ್ನ ಪಡುವರು.

ಜನಸಾಮಾನ್ಯವೇ ಹೀಗೆ.

ಪ್ರದೀಪನ ಅವಸ್ಥೆಯೂ ಅದೇರೀತಿಯಾಯಿತು.

ಬಹಿರಂಗಪಡಿಸಿದರೆ ಅವಮಾನವಾಗುವುದೆಂದು, ಅಂತರಂಗದಲ್ಲಿಯೇ ಮನೋವ್ಯಥೆ ಪಡಬೇಕಾಯಿತು.

ಮಗನು ಹುಟ್ಟಿದ ಸಂತೋಷದಲ್ಲಿ, ಅವನ ಮುಖವನ್ನು ನೋಡುವ ಆತುರದಲ್ಲಿ ನಿರಾಯುಧನಾಗಿ ಚಂಪಾಪುರಕ್ಕೆ ಹೊರಟಿದ್ದನು. ಆ ಪ್ರಯುಕ್ತ ಕಳ್ಳನ ಕೈಗೆ ಸಿಕ್ಕಿ ಅವಸ್ಥೆಪಡಬೇಕಾಯಿತು.

ಹಾಗಿಲ್ಲದೆ, ಮುಂಜಾಗರೂಕನಾಗಿ ಪಿಸ್ತೂಲನ್ನು ತನ್ನ ಜೊತೆಯಲ್ಲಿ ತೆಗೆದುಕೊಂಡು ಹೋಗಿದ್ದಿದ್ದರೆ, ಗಿರೀಶನು ಕೆಂಚನಿಗೆ ಭಯಪಡಿಸುವಾಗಲೇ

ತನ್ನಲ್ಲಿದ್ದ ಪಿಸ್ತೂಲನ್ನು ತೆಗೆದು, ಗಾಡಿಯ ಒಳಗಡೆ ಇದ್ದಹಾಗೆಯೇ ಆತನಿಗೆ ಹೆದರಿಸಿ ಓಡಿಸಬಹುದಿತ್ತು.

ಬೆದರಿಕೆಗೆ ಓಡದೆ ಹೋಗಿದ್ದಿದ್ದರೆ, ಅವನ ಕೈಗೋ, ಕಾಲಿಗೋ ಪಿಸ್ತೂಲಿನಿಂದ ಹೊಡೆದುರುಳಿಸಿ ಒದಗಿಬಂದಿದ್ದ ಗಂಡಾಂತರದಿಂದ ಉಳಿಯ ಬಹುದಿತ್ತು.

ಆ ರೀತಿ ನಡೆಯಲು ಅವಕಾಶವಿಲ್ಲದಂತಾಗಿ ಪ್ರದೀಪನು ಕಳ್ಳನಿಗೆ ಕೈಸೆರೆ ಯಾಳಾಗಬೇಕಾಯಿತು.

ಮಹಾ ಬುದ್ಧಿಶಾಲಿಯಾದವನೂ ಸಹ ಕೆಲವುವೇಳೆ ಎಡವಿಬೀಳುವು ದುಂಟು. ಪ್ರದೀಪನ ಪರಿಸ್ಥಿತಿಯು ಅದೇರೀತಿಯಾಯಿತು.

ತನ್ನ ಮನೋವೇದನೆಯ ಮರ್ಮವನ್ನು ಯಾರಲ್ಲಿಯೂ ಹೇಳಿಕೊಳ್ಳ ಲಿಲ್ಲ.

೧೩

ಎರಡು ತಿಂಗಳು ಕಳೆಯಿತು.

ತನ್ನ ಕೆಲಸಕಾರ್ಯಗಳಲ್ಲಿ ಪ್ರದೀಪನಿಗೆ ಹೆಚ್ಚು ಆಶಕ್ತಿಯಿಲ್ಲದೆ ಇದ್ದರೂ, ಪತ್ತೇದಾರರ ವಿಷಯವಾಗಿ ಮಾತ್ರ ಹೆಚ್ಚು ಜಾಗರೂಕನಾಗಿಯೇ ಇದ್ದನು.

ಅವರು ಎಂದಿದ್ದರೂ ತನಗೆ ಮೋಸಪಡಿಸಲು ಬರುವರೆಂದೂ, ಆಗ ಅವರನ್ನು ಹಿಡಿಯಬೇಕೆಂದೂ ಸಂಕಲ್ಪ ಮಾಡಿಕೊಂಡಿದ್ದನು.

ಎರಡು ತಿಂಗಳು ಕಳೆದರೂ ವಿಷಯವು ಬಹಿರಂಗವಾಗದ ಪ್ರಯುಕ್ತ, ತನ್ನ ವಿನಃ ಬೇರೆ ಯಾರಿಗೂ ತಿಳಿಯದೆಂದುಕೊಂಡನಲ್ಲದೆ, ತನ್ನ ಮರ್ಯಾದೆಯೇನೂ ಹೋಗಲಿಲ್ಲವೆಂದುಕೊಂಡನು.

ವಿಷಯವು ಬಹಿರಂಗವಾಗದ ಪ್ರಯುಕ್ತ, ಮೊದಲಿನಂತೆಯೇ ಅಹಂಭಾವವುಳ್ಳವನಾದನು.

ಪತ್ತೇದಾರರಿಂದಲೂ ವರ್ತಮಾನ ಬಾರದೆ ಇದ್ದ ಪ್ರಯುಕ್ತ, ಅವರಿಂದ ತನಗೆ ಮೋಸ ಪಡಿಸಲು ಸಾಧ್ಯವಾಗಲಿಲ್ಲವೆಂದು ಭಾವಿಸಿ ಆ ವಿಷಯವಾಗಿ ಕೊಂಚ ಕಟುವಾಗಿಯೇ ಚಂದ್ರನಾಥನಿಗೆ ಕಾಗದ ಬರೆದನು.

ಎರಡು ದಿನಗಳು ಕಳೆದನಂತರ ಚಂದ್ರನಾಥನಿಂದ ಪ್ರತ್ಯುತ್ತರ ಬಂದಿತು.

ವಿಷಯವನ್ನರಿಯುವ ಕುತೂಹಲವುಳ್ಳವನಾಗಿ ಪ್ರದೀಪನು ಕವರನ್ನು ಬಿಡಿಸಿ ಒಳಗಡೆಯಿದ್ದ ಕಾಗದವನ್ನು ನೋಡಲು ಅದರಲ್ಲಿ ಈ ರೀತಿ ಬರೆದಿತ್ತು.

ಶ್ರೀಯುತ ಪ್ರದೀಪನಿಗೆ—

ಕಾಂಚೀನಗರದಲ್ಲಿರುವ ಇನ್ಸ್ಪೆಕ್ಟರ್ ಚಂದ್ರನಾಥನು ಮಾಡುವ ವಿಶ್ವಾಸಪೂರ್ವಕ ವಂದನೆಗಳು. ||ಸಾಂ.|| ನೀನು ಬರೆದ ಕಾಗದವು

ತಲುಪಿ ವಿಷಯವೆಲ್ಲಾ ತಿಳಿಯಿತು. ನಿನ್ನ ಹಮ್ಮು ಇನ್ನೂ ನಿನ್ನಿಂದ ದೂರಾಗಲಿಲ್ಲ. ಅದಕ್ಕಾಗಿ ವಿಷಾದಪಡುವೆನು.

ನಿನ್ನ ಕಾಗದವನ್ನು ಪುರುಷೋತ್ತಮನಿಗೆ ತೋರಿಸಿದೆ. ಆತನು ನಿಮ್ಮನ್ನು ಕೂಡಲೇ ಕರೆಯಿಸಿಕೊಳ್ಳುವಂತೆ ಹೇಳಿದನು. ಕಾರಣ ತಿಳಿಯಲಿಲ್ಲ. ನೀನು ಈ ಕೂಡಲೇ ಹೊರಟು ಬರಬೇಕು.

ನೀನು ಮಗನು ಹುಟ್ಟಿದ ಸಂತೋಷದಲ್ಲಿರುವೆ. ಪುತ್ರನು ಜನಿಸಿದ ವಿಷಯವಾಗಿ ನನಗೆ ಒಂದು ಕಾಗದವನ್ನೂ ಬರೆಯಲಿಲ್ಲ. ಆದರೇ, ನನಗೇನೂ ಬೇಸರವಿಲ್ಲ. ಮಗನ ನಾಮಕರಣ ಮಹೋತ್ಸವಕ್ಕೆ ಚಂಪಾಪುರಕ್ಕೆ ಹೋಗಿದ್ದೆಯೆಂದೂ ತಿಳಿಯಿತು.

ಇನ್ನು ಹೆಚ್ಚು ಬರೆಯುವುದು ಅನಾವಶ್ಯಕ.

ಕೂಡಲೇ ಬರುವೆಯೆಂದು ನಂಬಿರುವೆನು.

ಇತಿ,<br>
ನಿನ್ನ ಕ್ಷೇಮಾಭಿಲಾಷಿ,<br>
**'ಚಂದ್ರನಾಥ'**<br>
ಇನ್ಸ್‌ಪೆಕ್ಟರ್,<br>
ಕಾಂಚೀನಗರ.

ಕಾಗದವನ್ನು ಓದಿ ನೋಡಿದ ಪ್ರದೀಪನು ಆಶ್ಚರ್ಯಚಕಿತನಾದನು.

"ಪುರುಷೋತ್ತಮನು ನನ್ನನ್ನು ಕರೆಯಿಸಿಕೊಳ್ಳುವ ಕಾರಣವೇನಿರಬಹುದು? ನನ್ನೊಡನೆ ಮಾತನಾಡುವಂತಹ ವಿಷಯವೇನಿದೆ? ಅದರಲ್ಲಿಯೂ ಕೂಡಲೇ ಬರಹೇಳಲು ಏನು ಉದ್ದೇಶವಿರಬಹುದು? ಸೂಕ್ಷ್ಮವಾಗಿ ಪರ್ಯಾಲೋಚಿಸಿ ನೋಡಿದರೆ ನನ್ನನ್ನು ಕರೆಯಿಸಿಕೊಳ್ಳುವುದರಲ್ಲಿ ಏನೋ ಮಹತ್ವವಿರುವಂತೆ ತೋರುತ್ತದೆ. ಬಹುಶಃ ಹಿಂದೆ ಶೇಷಗಿರಿಯನ್ನು ಹಿಡಿದಂತೆ, ಈ ಸಾರಿ ಗಿರೀಶನನ್ನೂ ಕೆಂಚನನ್ನೂ ಹಿಡಿದಿರಬಹುದೇ?........ಛೇ! ಇರಲಾರದು. ಆ ಘಟನೆಯು ನಡೆದಿರುವುದು ರಾಜೇಂದ್ರಪುರಕ್ಕೂ, ಚಂಪಾಪುರಕ್ಕೂ ಮಧ್ಯೆ ಇದ್ದ ಅರಣ್ಯ ಮಾರ್ಗದಲ್ಲಿ. ಅಲ್ಲಿಗೇಕೆ ಅವರು ಬರುವರು? ಬೇರೆ ಏನೋ ವಿಷಯವಾಗಿ ಕರೆಯಿಸಕೊಳ್ಳಬಹುದು?........ಏನೋ ವಿಶೇಷವಿದೆ. ಈಗ ಅಲ್ಲಿಗೆ ಹೋಗುವುದೇ ಸರಿ. ಅಲ್ಲಿಗೆ ಹೋದನಂತರ ಏನು

ವಿಷಯವೆಂದು ತಿಳಿಯುವುದು. ಈಗಲೇ ಈ ವಿಷಯವಾಗಿ ಯೋಚಿಸಿ ತಲೆ ಕೆಡಿಸಿಕೊಳ್ಳುವುದು ಸರಿಯಲ್ಲ.'

ಎಂಬುದಾಗಿ ಯೋಚಿಸಿಕೊಂಡು, ಕಾಂಚೀನಗರಕ್ಕೆ ಹೊರಡಲು ಸಿದ್ಧತೆ ಮಾಡಿಕೊಂಡು ಹೊರಟೇಬಿಟ್ಟನು.

ಪುರುಷೋತ್ತಮನು ಕರೆಯಿಸಿಕೊಳ್ಳುವ ವಿಷಯವಾಗಿ ಯೋಚಿಸಿ ತಲೆ ಕೆಡಿಸಿಕೊಳ್ಳುವುದು ಅನಾವಶ್ಯಕವೆಂದು ಭಾವಿಸಿದ್ದರೂ ಯೋಚನೆಯು ಅವನ ಹೃದಯದಿಂದ ದೂರಾಗಲಿಲ್ಲ.

ಹಲವು ಬಗೆಯ ಯೋಚನೆಗಳು ಅವನ ಮೆದುಳಿಗೆ ಹೊಳೆದು ಯಾವುದೂ ಇತ್ಯರ್ಥವಾಗದೆ, ಪುನಃ ಹೊಸ ಯೋಚನೆಗಳು ಅವುಗಳೊಂದಿಗೆ ಹುಟ್ಟಿ ಕೊಳ್ಳುತ್ತಿದ್ದುವು.

ಸುಖದುಃಖಗಳ ಯೋಚನೆಯಿಲ್ಲದೆ, ಮಳೆಗಾಳಿಗಳ ಭೀತಿಯಿಲ್ಲದೆ, ರೋಗರುಜಿನಾದಿಗಳ ಭಯವಿಲ್ಲದೆ, ಹಗಲು ರಾತ್ರಿಗಳೆಂಬ ಪರಿವೆಯಿಲ್ಲದೆ ರೈಲು ಒಂದೇಸಮನಾಗಿ ಓಡುತ್ತಿತ್ತು.

ರೈಲು ಎಷ್ಟು ವೇಗವಾಗಿ ಹೋಗುತ್ತಿದ್ದರೂ ಪ್ರದೀಪನಿಗೆ ಅದು ನಿಧಾನ ವಾಗಿ ಹೋಗುತ್ತಿರುವುದೆಂದೇ ಭಾಸವಾಗುತ್ತಿತ್ತು.

ಪತ್ತೇದಾರರಿಗೆ ತಾನು ಬರೆದ ಕಾಗದದಿಂದ ಅವಮಾನವಾದಂತಾಗಿ, ತನ್ನನ್ನು ಕರೆಯಿಸಿಕೊಂಡು ತನ್ನಲ್ಲಿ ಕ್ಷಮಾಭಿಕ್ಷೆಯನ್ನು ಯಾಚಿಸಬಹುದೇ ? ಎಂಬ ಯೋಚನೆಯೂ ಪ್ರದೀಪನಿಗೆ ಹೊಳೆಯದಿಗಲಿಲ್ಲ.

ಹಾಗೆ ಯೋಚಿಸಿಕೊಂಡನಂತರ ಆತನ ಆನಂದವನ್ನು ವರ್ಣಿಸಲಾಗದು. ಏನೋ ಒಂದು ಬಗೆಯಲ್ಲಿ ಹೆಮ್ಮೆಗೊಂಡು, ಪುರುಷೋತ್ತಮನಿಗಿಂತಲೂ ತಾನೇ ಮೇಲಾದವನೆಂದುಕೊಂಡನು.

ಪುನಃ ಮತ್ತೊಂದು ಬಗೆಯಾದ ಯೋಚನೆ.

'ನಾನು ಚಂದ್ರನಾಥನ ವಿಳಾಸಕ್ಕೆ ಬರೆದ ಕಾಗದವನ್ನು ಆತನು ಪುರು ಷೋತ್ತಮನಿಗೆ ತೋರಿಸಿರುವನು. ಆತನಿಗೆ ಆ ಕಾಗದದ ವಿವರಣೆಯಿಂದ ಅವಮಾನವಾದಂತಾಗಿದೆ. ಪ್ರದೀಪನಿಗೆ ಮೋಸಪಡಿಸಲು ಸಾಧ್ಯವಾಗದೆಂದು ಭಾವಿಸಿ, ನನ್ನನ್ನು ಕರೆಯಿಸಿಕೊಂಡು ರಾಜಿ ಮಾಡಿಕೊಳ್ಳುವುದೇನೋ ಸಹಜ. ಆದರೆ ಪ್ರದೀಪನು ಕಾಂಚೀನಗರಕ್ಕೆ ಬರುವುದೇನೋ ಸಹಜ. ಒಂದುವೇಳೆ

ಸಾಧ್ಯವಾದರೆ ಮಾರ್ಗಮಧ್ಯದಲ್ಲಿ ಎಲ್ಲಿಯಾದರೂ ಮೋಸಪಡಿಸಲು ಕೊನೆಯ ಪ್ರಯತ್ನ ಮಾಡಿನೋಡುವೆನು ಎಂಬ ಅಭಿಪ್ರಾಯದಿಂದ, ರಾಜೇಂದ್ರಪುರ ದಿಂದ ನನ್ನನ್ನು ವೇಷಾಂತರದಿಂದ ಹಿಂಬಾಲಿಸಿ ಬಂದಿದ್ದರೂ ಬಂದಿರಬಹುದು. ಆದ್ದರಿಂದ ಜಾಗರೂಕನಾಗಿರುವುದು ಉತ್ತಮ.'

ಎಂದು ಯೋಚಿಸಿ ಆ ಬೋಗಿಯಲ್ಲಿ ಕುಳಿತಿದ್ದವರನ್ನೆಲ್ಲಾ ಒಂದುಸಾರಿ ಸೂಕ್ಷ್ಮವಾಗಿ ನೋಡಿದನು.

ಆ ಬೋಗಿಯಲ್ಲಿ ಸುಮಾರು ಹದಿನೈದು ಜನರಿದ್ದರು.

ಅವರಲ್ಲಿ ಪ್ರದೀಪನ ಪರಿಚಿತರಾರೂ ಇರಲಿಲ್ಲ.

ಪ್ರದೀಪನಿಗೆ ಅವರಲ್ಲಿ ಒಬ್ಬಿಬ್ಬರ ಮೇಲೆ ಅನುಮಾನವುಂಟಾಯಿತಾ ದರೂ, ಪರಿಶೋಧಿಸುವ ಸಾಹಸವನ್ನು ಮಾಡಲಾಗಲಿಲ್ಲ.

ಪರಿಶೋಧಿಸಿದಾಗ ಅವರು ರಾಮನಾಥ, ಪುರುಷೋತ್ತಮರಾಗಿದ್ದರೆ ಸರಿ, ಇಲ್ಲದೇಹೋದರೆ ತನಗೆ ಅವಮಾನವಾಗುವುದು ನಿಶ್ಚಯವೆಂದು ಭಾವಿಸಿ ಪರೀಕ್ಷಿಸಲಿಲ್ಲ.

ಆದರೆ ಅವರ ಮೇಲಿದ್ದ ಅನುಮಾನವು ದೂರಾಗಲಿಲ್ಲ. ಅವರಿಬ್ಬರೂ ಇತರ ಪ್ರಯಾಣಿಕರಂತೆ ಕುಳಿತಿರದೆ ಏನೋ ಒಂದು ಬಗೆಯ ಭಾವಭಂಗಿ ಯಲ್ಲಿ ಕುಳಿತಿದ್ದರು.

ಇತರರು ವಿನೋದವಾಗಿ ಮಾತನಾಡುತ್ತಲಿದ್ದರೆ, ಅವರಿಬ್ಬರು ಮೌನ ರಾಗಿಯೇ ಕುಳಿತಿದ್ದರು.

ಪ್ರದೀಪನ ಸಂದೇಹವು ಬಲವಾಯಿತು. ಇವರು ಪತ್ತೇದಾರರೇ ಸರಿ, ತನಗೆ ಮೋಸಪಡಿಸುವುದಕ್ಕಾಗಿಯೇ ಬಂದಿರುವರು. ಸಂದೇಹವಿಲ್ಲವೆಂಬು ದಾಗಿ ನಿರ್ಧರಮಾಡಿಕೊಂಡನು.

ತನ್ನ ಮನದಲ್ಲಿ, 'ಪುರುಷೋತ್ತಮಾ ! ನನಗೆ ಮೋಸಗೊಳಿಸಲು ಈ ವೇಷದಲ್ಲಿ ಬಂದಿರುವೆಯಾ ? ನಿನ್ನ ಆಟವು ನನ್ನ ಬಳಿಯಲ್ಲಿ ನಡೆಯದು. ಕಾಂಚೀನಗರವನ್ನು ತಲುಪುವುದರಲ್ಲಿಯೇ ನಿನ್ನ ರಹಸ್ಯವನ್ನು ಬಯಲುಮಾಡದೆ ಹೋದರೆ ನಾನು ಪ್ರದೀಪನಲ್ಲ' ಎಂಬುದಾಗಿ ಯೋಚಿಸಿಕೊಂಡು ನಸುನಕ್ಕನು.

ಅವರೊಡನೆ ಮಾತನಾಡಿಯಾದರೂ ಪರಿಚಯ ಮಾಡಿಕೊಳ್ಳಬೇಕೆಂಬ

ಉದ್ದೇಶದಿಂದ, ಯಾವುದೋ ಒಂದು ನೆವವನ್ನು ಕಲ್ಪಿಸಿಕೊಂಡು ಅವರೊಡನೆ ಮಾತನಾಡಿದನು.

ಅವರಿಬ್ಬರೂ ದೇವನಗರದವರೆಂದೂ, ಪ್ರಖ್ಯಾತ ರೇಷ್ಮೆ ವ್ಯಾಪಾರಿಗಳೆಂದೂ, ಅವರು ಈಗ ಭೂಪತಿನಗರಕ್ಕೆ ಹೊರಟಿರುವರೆಂದೂ ತಿಳಿಯಿತು.

ಪ್ರದೀಪನಿಗೆ ಆ ಸ್ಥಳದಲ್ಲಿಯೂ ಅವಮಾನವಾಯಿತು. ಅವನ ಯೋಚನೆಗಳೆಲ್ಲವೂ ಆತನಿಗೆ ವಿರುದ್ಧವಾಗಿಯೇ ವರ್ತಿಸಿದುವು.

ಆದರೂ ಪ್ರದೀಪನ ಸಂದೇಹವು ನಿವೃತ್ತಿಯಾಗಲಿಲ್ಲ.

'ಇವರಿಬ್ಬರೂ ಪತ್ತೇದಾರರೇ ಇರಬಹುದು. ರೇಷ್ಮೆ ವ್ಯಾಪಾರಿಗಳ ವೇಷದಲ್ಲಿ ಹೊರಟಿರಬಹುದು. ಆಗಲಿ, ಈ ನನ್ನ ಸಂದೇಹವನ್ನು ನಿವೃತ್ತಿ ಮಾಡಿಕೊಳ್ಳದೆ ಬಿಡಲಾರೆನು.'

ಎಂಬುದಾಗಿ ಯೋಚಿಸಿಕೊಂಡು, ಏನೂ ಅರಿಯದವನಂತೆ ಕುಳಿತುಕೊಂಡನು.

ರೈಲು ಕಣಿವೇಹಳ್ಳಿ ಎಂಬ ನಿಲ್ದಾಣದಲ್ಲಿ ನಿಂತಾಗ ಟಿಕೇಟ್ ಕಲೆಕ್ಟರನು ಅವರ ಬೋಗಿಗೆ ಹತ್ತಿದನು.

ಪ್ರದೀಪನಿಗೆ ಆನಂದವಾಯಿತು. ಈ ರೇಷ್ಮೆವ್ಯಾಪಾರಿಗಳು ದೇವನಗರದಿಂದ ಹೊರಟಿರುವರೇ ? ತಪ್ಪಿದರೆ ರಾಜೇಂದ್ರಪುರದಿಂದ ಹೊರಟಿರುವರೇ ? ಎಂಬುದು ತಿಳಿಯುತ್ತದೆ. ಎಂಬುದಾಗಿ ಭಾವಿಸಿ ಅವರು ತಮ್ಮ ಟಿಕೇಟನ್ನು ತೆಗೆದು ಕಲೆಕ್ಟರನ ಕೈಗೆ ಕೊಡುವಾಗ ಆ ಟಿಕೇಟ್‌ಗಳನ್ನು ನೋಡಿದನು.

ಅಲ್ಲಿಗೆ ಅವನ ಸಂದೇಹವು ಬಹುಮಟ್ಟಿಗೆ ನಿವೃತ್ತಿಯಾದಂತಾಯಿತು.

ರಾಜೇಂದ್ರಪುರದಿಂದ ಎಪ್ಪತ್ತಾರು ಮೈಲಿಗಳ ದೂರದಲ್ಲಿದ್ದ ದೇವನಗರದಿಂದ ಹೊರಟಿರುವಾಗ ಇವರು ರೇಷ್ಮೆವ್ಯಾಪಾರಿಗಳೇ ಎಂಬುದಾಗಿ ಭಾವಿಸಿಕೊಂಡನು.

ಭೂಪತಿನಗರಕ್ಕೆ ಹೋಗುವವರು ಕಾಂಚೀನಗರದಲ್ಲಿಳಿಯುವರೇ ? ಇಲ್ಲವೇ ? ಎಂಬುದು ತಿಳಿಯುತ್ತಷೆ. ಆ ಒಂದು ವಿಧದಲ್ಲಿಯೂ ಪರಿಶೋಧನೆ ನಡೆಸಿದರೆ ತನ್ನ ಸಂದೇಹವು ಸಂಪೂರ್ಣ ನಿವಾರಣೆಯಾಗುವುದು ಎಂಬುದಾಗಿ ಯೋಚಿಸಿಕೊಂಡನು.

ಪ್ರದೀಪನು ರೈಲಿನಿಂದ ಕೆಳಗಿಳಿದು ಆ ಬೋಗಿಗೆ ಸ್ವಲ್ಪ ದೂರ ಹೋಗಿ, ಯಾರದೋ ನಿರೀಕ್ಷೆಯಲ್ಲಿರುವವನಂತೆ ಆ ಬೋಗಿಯ ಮೇಲೆ ಕಣ್ಣಿಟ್ಟನು.

ಭೂಪತಿನಗರಕ್ಕೆ ಹೋಗಬೇಕಾಗಿದ್ದ ಪ್ರಯುಕ್ತ ಆ ರೇಷ್ಮೆವ್ಯಾಪಾರಿಗಳು ಅಲ್ಲಿಳಿಯಲಿಲ್ಲ.

ರೈಲು ಹೋಗುವವರೆವಿಗೂ ಅಲ್ಲಿಯೇ ನಿಂತಿದ್ದು, ಬಳಿಕ ಪ್ರದೀಪನು ನಗರದೊಳಗೆ ಹೋಗಬೇಕೆಂಬ ಯೋಚನೆ ಮಾಡಿದನು.

ಶ್ರೀಮಂತ ರೇಷ್ಮೆ ವ್ಯಾಪಾರಿಗಳ ಮೇಲೆ ಸಂದೇಹಗೊಂಡಿದ್ದ ಪ್ರದೀಪನ ಅನುಮಾನವು ಸಂಪೂರ್ಣ ನಿವಾರಣೆಯಾದಂತಾಯಿತು.

ರೈಲ್ವೇ ನಿಲ್ದಾಣದಿಂದ ಹಿಂದಿರುಗುವಾಗ ಶ್ರೀಮಂತರನ್ನು ಮರೆತು ಪತ್ತೇದಾರರ ಯೋಚನೆಗೆ ತೊಡಗಿದನು.

ಪತ್ತೇದಾರರು ವೇಷಾಂತರದಿಂದ ಈ ಸ್ಥಳದಲ್ಲಿಯಾದರೂ ತನಗೆ ಮೋಸ ಗೊಳಿಸಲು ಬಂದಿರಬಹುದೋ, ಏನೋ ಎಂಬ ಅಭಿಪ್ರಾಯವುಳ್ಳವನಾಗಿ ಸುತ್ತಮುತ್ತಲೂ ನೋಡಲು, ಅನುಮಾನಕ್ಕೆ ಆಸ್ಪದನಾದ ವ್ಯಕ್ತಿ ಯಾರೂ ಗೋಚರಿಸಲಿಲ್ಲ.

'ಇಲ್ಲಿಗೆ ಬಂದಿರಲಾರರು. ಒಂದುವೇಳೆ ಬಂದರೆ ಅವಮಾನವಾಗುವುದು ಖಂಡಿತವೆಂದು ಅವರಿಗೆ ತಿಳಿದಿದೆ. ಆ ಪ್ರಯುಕ್ತ ಇಲ್ಲಿಗೆ ಬಂದಿಲ್ಲ. ಈಗ ಅವರಲ್ಲಿಗೆ ಹೋದರೆ ರಾಜಿಯಾಗುವುದು ಖಂಡಿತಾ. ನಮ್ಮಿಬ್ಬರ ಮಧ್ಯವರ್ತಿ ಯಾಗಿ ಚಂದ್ರನಾಥನು ನಿಲ್ಲುವನು. ನನ್ನ ಮುಂದೆ ಅವರ ಆಟವೇನೂ ನಡೆಯಲಿಲ್ಲ. ನನಗೆ ಮೋಸಪಡಿಸುವುದೆಂದರೇನು ಹುಡುಗಾಟವೇ ?'

ಎಂಬುದಾಗಿ ಯೋಚಿಸಿ, ತನಗೆ ತಾನೇ ಹೊಗಳಿಕೊಳ್ಳುತ್ತಾ ನಗರ ದೊಳಗೆ ಪ್ರವೇಶಿಸಿ ಚಂದ್ರನಾಥನ ಮನೆಗೆ ಹೊರಟನು.

ಮಾರ್ಗದಲ್ಲಿಯೂ ಸಹ ಯೋಚನೆಯೇ. ಆತನ ಯೋಚನೆಗೆ ಬಿಡು ಗಡೆಯೇ ಇರಲಿಲ್ಲ.

ಪತ್ತೇದಾರರು ತನಗೆ ಮೋಸಪಡಿಸಲು ಸಾಧ್ಯವಾಗಲಿಲ್ಲವೆಂಬ ಆನಂದದ ಯೋಚನಾವಧಿಯ ಆವೇಶದಲ್ಲಿ, ಹಿಂದೆ ತನಗಾದ ಅವಮಾನವೆಲ್ಲಾ ಮರೆ ತನು.

ಪುರುಷೋತ್ತಮನೇನಾದರೂ ಶೇಷಗಿರಿಯ ಪ್ರಸ್ತಾಪವನ್ನೆತ್ತಿ ತನ್ನನ್ನು ಕೆಣಕಿದರೆ ಆತನಿಗೆ ಸರಿಯಾದ ಪ್ರಾಯಶ್ಚಿತ್ತ ಮಾಡದೆ ಬಿಡಬಾರದೆಂದು ಕೊಂಡನು.

ಆ ವೇಳೆಯಲ್ಲಿ ಕೋಪಿಷ್ಟನಾದ ರಾಮನಾಥನೇನಾದರೂ ಕೋಪಗೊಂಡರೆ, ಹಿಂದಿನಂತೆ ಸುಮ್ಮನಿರದೆ ಆತನಿಗೂ ಒಂದು ಕೈ ನೋಡಿಯೇಬಿಡಬೇಕೆಂದು ದೃಢಸಂಕಲ್ಪ ಮಾಡಿಕೊಂಡನು.

ಚೋರರಿಬ್ಬರೂ ತನ್ನ ಮೇಲಿನ ಕ್ರೋಧದಿಂದ ಸೇಡು ತೀರಿಸಿಕೊಂಡರಾದರೂ, ಪತ್ತೇದಾರರು ತನಗೆ ಮೋಸಪಡಿಸಲು ಸಾಧ್ಯವಾಗಲಿಲ್ಲವೆಂದು ಪ್ರದೀಪನಿಗೆ ಆನಂದವಾಗಿದ್ದಿತು.

ಆದರೇ ! ಅದಕ್ಕೆ ವೇಳೆಯಿರಲಿಲ್ಲ. ಆ ಒಂದು ಮಾತಿಗೆ ತಾನು ಸಿಕ್ಕಿಕೊಳ್ಳಬಹುದೆಂದು ಯೋಚಿಸಿಕೊಂಡನಾದರೂ, ಅವರು ಮುಂದೆ ಮೋಸಪಡಿಸುವೆನೆಂದು ಹೇಳಿದರೆ ಅದಕ್ಕೊಂದು ಅವಧಿಯನ್ನು ಗೊತ್ತುಮಾಡಿಕೊಳ್ಳದೆ ಬಿಡಬಾರದೆಂದು ಸಂಕಲ್ಪಮಾಡಿಕೊಂಡು ಮುಂದೆ ಜಾಗರೂಕನಾಗಿದ್ದರೆ ತನಗೆ ಮೋಸಪಡಿಸಲಾರರೆಂದುಕೊಂಡನು.

ಯೋಚನೆಯಲ್ಲಿ ದಾರಿ ಸಾಗಿದುದೇ ತಿಳಿಯಲಿಲ್ಲ.

ಚಂದ್ರನಾಥನ ಮನೆಯು ಸಮೀಪಿಸಿತು. ಪ್ರದೀಪನ ಯೋಚನೆಯೂ ದೂರವಾಯಿತು.

೧೪

ಇನ್ಸ್ಪೆಕ್ಟರ್ ಚಂದ್ರನಾಥನು ತನ್ನ ಮನೆಯಲ್ಲಿಯೇ ಇರುವ ವೇಳೆಯಲ್ಲಿ ಪ್ರದೀಪನು ಆಗಮಿಸಿದನು.

ಚಂದ್ರನಾಥನು ಆದರದಿಂದಲೇ ಸ್ವಾಗತಿಸಿ ತನ್ನ ಸಂತೋಷವನ್ನು ವ್ಯಕ್ತ ಪಡಿಸಿದನು.

ಪ್ರದೀಪನಿಗೆ ಆತನ ಆದರವೇನೂ ಬೇಕಿರಲಿಲ್ಲ. ಮೊದಲು ತಾನು ಬಂದ ಕಾರ್ಯವಾಗಬೇಕಿತ್ತು. ಈಗಲೇ ಈತನೊಡನೆ ಪುರುಷೋತ್ತಮನ ಮನೆಗೆ ಹೋಗಬೇಕೆಂದು ಸಂಕಲ್ಪಿಸಿಕೊಂಡನು.

ಕುರ್ಚಿಯ ಮೇಲೆ ಕುಳಿತು—

"ಚಂದ್ರನಾಥ! ಪುರುಷೋತ್ತಮನು ನನ್ನನ್ನು ಕರೆಯಿಸಿಕೊಂಡ ಕಾರಣ ವೇನು ? " ಎಂದು ಕೇಳಿದನು.

"ನನಗೆ ತಿಳಿಯದು. ನೀನು ಬರೆದ ಕಾಗದವನ್ನು ತೋರಿಸಿದ್ದಕ್ಕೆ ನಿನ್ನನ್ನು ಕೂಡಲೇ ಕರೆಯಿಸಿಕೊಳ್ಳುವಂತೆ ಹೇಳಿದುದೆಷ್ಟೋ ಅಷ್ಟೇ. ಹೆಚ್ಚಿನ ವಿಷಯವು ನನಗೆ ತಿಳಿಯದು."

"ನಿನ್ನ ಮುಂದೆ ಆ ವಿಷಯವಾಗಿ ಏನೂ ಹೇಳಲಿಲ್ಲವೇ ? "

"ಇಲ್ಲಾ! ಹೇಳಿದ್ದರೆ ನಾನು ನಿನ್ನೊಡನೆ ಹೇಳದಿರುತ್ತಿರಲಿಲ್ಲ."

"ಹಾಗಾದರೇ ! ಯಾವ ಅಭಿಪ್ರಾಯದ ಮೇಲೆ ಕರೆಯಿಸಿಕೊಂಡಿರ ಬಹುದೆಂದು ನಿನ್ನ ಉದ್ದೇಶ ! "

"ನನಗೆ ಯಾವ ವಿಷಯವಾಗಿ ಏನೂ ತಿಳಿಯದೆಂದು ಹೇಳಿದೆನಲ್ಲ. ಪುನಃ ಮೇಲಿಂದಮೇಲೆ ಏಕೆ ಒತ್ತಾಯ ಮಾಡುವೆ ? ಆತನಲ್ಲಿಗೆ ಹೋದರೆ ವಿಷಯವು ತಿಳಿಯದಿರುವುದಿಲ್ಲ. ಅಷ್ಟರಲ್ಲಿ ಆತುರವೇಕೆ ? ನಡೆ ಹೋಗೋಣ."

"ಚಂದ್ರನಾಥ! ನಿನ್ನಲ್ಲಿ ಒಂದು ವಿಷಯವನ್ನು ತಿಳಿಸಬೇಕೆಂದಿರುವೆನು."

"ಏನು ವಿಷಯ ?"

—ಎಂದು ಕುತೂಹಲನಾದ ಚಂದ್ರನಾಥನು ಕೇಳಿದನು.

"ಪುರುಷೋತ್ತಮನಿಗೂ ನನಗೂ ನಡೆದಿರುವ ಪ್ರತಿಜ್ಞೆಯು ನಿನಗೆ ತಿಳಿದಿದೆಯಲ್ಲವೇ ?"

"ಈಗ ತಿಳಿದಿಲ್ಲವೆಂದವರಾರು ?"

"ಪ್ರಶ್ನೆಯ ಮೂಲಕ ಉತ್ತರಿಸಬೇಡ. ನಾನು ಕೇಳಿದುದಕ್ಕೆ ಉತ್ತರ ಮಾತ್ರ ಕೊಟ್ಟರೆ ಸಾಕು."

ಚಂದ್ರನಾಥನು ನಗುತ್ತಾ—

"ಆಗಬಹುದು. ಅದೇನು ನಿನ್ನ ಪ್ರಶ್ನೆಗಳು ? ಕೇಳು. ಹೇಳುವೆನು" ಎಂದನು.

"ನಮ್ಮಿಬ್ಬರ ಪ್ರತಿಜ್ಞೆಯ ವಿವರವೆಲ್ಲಾ ನಿನಗೆ ತಿಳಿದಿದೆಯಲ್ಲವೇ ?"

"ತಿಳಿದಿದೆ."

"ಅದಕ್ಕೆ ಅವಧಿಯೇನಾದರೂ ಗೊತ್ತುಮಾಡಿತ್ತೇ ?"

"ಇಲ್ಲ."

"ಅದೇ ನನ್ನ ತಪ್ಪು. ನಾನು ಇಷ್ಟು ಚತುರನಾಗಿದ್ದು ಆ ಒಂದು ವಿಷಯವಾಗಿ ಅವಿವೇಕಿಯಂತಾದೆನು. ಆ ರೀತಿಯಾದುದು ಇತರರ ತಪ್ಪಲ್ಲ. ನನ್ನ ತಪ್ಪು."

ಸೋಜಿಗನಾದ ಚಂದ್ರನಾಥನು—

"ಏಕೆ ? ಈಗ ಏನಾಯಿತು ? ಏನು ನಡೆದಿದೆ ?" ಎಂದು ಕೇಳಿದನು.

"ನಡೆಯುವುದೇನು ? ನಡೆದಿರುವುದೆಲ್ಲಾ ನಡೆದಿದೆ. ನಡೆಯದಿರುವುದೆಲ್ಲಾ ನಡೆಯುವುದರಲ್ಲಿದೆ."

"ನೀನು ಒಗಟಿನ ಮೇಲೆ ಹೇಳಿದರೆ ಅರ್ಥವಾಗುವುದಿಲ್ಲ. ವಿಷಯವೇನು ? ವಿವರವಾಗಿ ಹೇಳು ?"

"ನನಗೆ, ಪುರುಷೋತ್ತಮನಿಗೆ ಪಂಥ ನಡೆದು ಎಷ್ಟು ತಿಂಗಳಾಯಿತು ?"

"ಹಲವು ತಿಂಗಳಾಯಿತು."

"ಇಷ್ಟು ತಿಂಗಳಾದರೂ ಪತ್ತೇದಾರರಿಬ್ಬರಿಂದಲೂ ನನಗೆ ಮೋಸಪಡಿಸಲು ಸಾಧ್ಯವಾಗಲಿಲ್ಲ."

"ಈಗ ಏನಾಗಬೇಕಾಗಿದೆ ? "

"ಆಗುವುದೇನು ? ಅದಕ್ಕೇನು ಅವಧಿಯಿಲ್ಲವೇ ? ವರ್ಷವೆಲ್ಲಾ ಕಾಯಬೇಕೇ ? ಅವಧಿಯಿಲ್ಲದೆಹೋದರೆ ಹತ್ತುವರ್ಷವಾದರೂ ಕಾಯಬೇಕಾಗುತ್ತದೆ. ಅದಕ್ಕಾಗಿಯೇ ನಾನು ಅವಿವೇಕಿಯಂತಾದೆನೆಂದು ತಿಳುಹಿಸಿದ್ದು."

"ಅಷ್ಟು ಮಾತ್ರವೇ ? "

"ನಿನಗೆ ಅಲ್ಪವಾಗಿ ತೋರಬಹುದು. ನನಗೆ ಹಿಮಾಲಯ ಪರ್ವತದಷ್ಟು ಅಗಾಧವಾಗಿ ತೋರುತ್ತದೆ."

"ವೀರಾಧಿವೀರನೆಂದು ಬಿರುದು ಪಡೆದ ನಿನಗೆ ಅಗಾಧವೇ ? ನೀನೇ ಈ ರೀತಿ ಹೇಳಿದರೆ ಹೇಗೆ ? ಇಂತಹ ಮಾತನ್ನು ನನ್ನಂತವರು ಹೇಳಬೇಕು. ತಮ್ಮಂತವರಿಗೆ ಅಲ್ಪ ಕಾರ್ಯವು ಅಗಾಧವಾಗಿ ತೋರಿದರೆ, ನಿನ್ನಂತವರಿಗೆ ಅಗಾಧವಾದ ಕಾರ್ಯವು ಅಲ್ಪವಾಗಿಯೇ ತೋರುವುದು. ಆ ವಿಷಯವಿರಲಿ. ಈಗ ಏನಾಗಬೇಕಾಗಿದೆ ಹೇಳು ? ಸುಮ್ಮನೆ ಕೆಲಸಕ್ಕೆ ಬಾರದ ಮಾತಿನಿಂದ ಪ್ರಯೋಜನವಿಲ್ಲ."

"ಪತ್ತೇದಾರರು ಪಂಥ ಮಾಡಿ ಹಲವು ತಿಂಗಳಾಯಿತು. ಈವರೆವಿಗೆ ನನಗೆ ಮೋಸಪಡಿಸಲು ಸಾಧ್ಯವಾಗದೆ ಹೋಯಿತು. ಆ ವಿಷಯವಾಗಿ ನಾನು ಕಾಗದ ಬರೆದುದಕ್ಕೆ ಆತನು ನನ್ನನ್ನು ಕರೆಯಿಸಿಕೊಂಡನು. ಏಕೆ ಕರೆಯಿಸಿಕೊಂಡನೆಂದು ನನಗೆ ತಿಳಿದಿದೆ."

ವಿಸ್ಮಿತನಾದ ಚಂದ್ರನಾಥನು--

"ಏನು ತಿಳಿದಿದೆ ?" ಎಂದು ಕೇಳಿದನು.

"ಪ್ರದೀಪನಿಗೆ ಮೋಸ ಪಡಿಸಲು ಸಾಧ್ಯವಾಗುವುದಿಲ್ಲವೆಂದು, ಅವರಿಬ್ಬರೂ ಮಾತನಾಡಿಕೊಂಡು, ಚಂದ್ರನಾಥನ ಮೂಲಕ ರಾಜಿ ಮಾಡಿಕೊಳ್ಳಬೇಕೆಂದು ಬಯಸಿರುವರು. ಅದಕ್ಕಾಗಿ ನನ್ನನ್ನು ನಿನ್ನ ಮೂಲಕ ಕರೆಯಿಸಿಕೊಂಡಿರುವರು.

ಚಂದ್ರನಾಥನು ನಕ್ಕು—

"ಪ್ರದೀಪಾ ! ಆ ರೀತಿ ನಡೆಯುವುದೆಂದು ನೀನು ನಿನ್ನ ಕನಸು, ಮನಸಿನಲ್ಲಿಯೂ ಯೋಚಿಸಬೇಡ. ನಿನ್ನ ಗಾಳಿಗೋಪುರವೆಲ್ಲಾ ನಿನ್ನಲ್ಲಿಯೇ ಇರಲಿ. ಪತ್ತೇದಾರರು ಸೋತು ಶರಣಾಗತರಾಗುವುದೆಂದರೆ ನಂಬಲಾರದಂತಹ ವಿಷಯ." ಎಂದನು.

ಪ್ರದೀಪನಿಗೆ ಸಿಟ್ಟು ಬಂದಿತು. ರಾಮನಾಥನಂತೆ ಆತನೂ ಸಹ ಕೋಪಿಷ್ಠನಲ್ಲವೇ ? ಈತನಿಗೆ ಬುದ್ಧಿ ಕಲಿಸದೆ ಬಿಡಬಾರದೆಂದುಕೊಂಡನು.

"ಚಂದ್ರನಾಥ ! ನೀನು ಅವರ ಪರವಾಗಿ ಮಾತನಾಡಿದರೆ ನನಗೇನೂ ಬೇಸರವಿಲ್ಲ. ನೀನು ಅವರ ಹೊಗಳುಭಟ್ಟನೆಂದು ನನಗೆ ತಿಳಿದೇ ಇದೆ. ಆದರೇ! ನಿನ್ನಲ್ಲಿ ಒಂದು ಮುಖ್ಯವಾದ ವಿಷಯವನ್ನು ತಿಳಿಸಬೇಕಾಗಿದೆ. ತಿಳಿಯಿತೇ ?"

"ಏನು ವಿಷಯ ಹೇಳು ?"

"ಪುರುಷೋತ್ತಮನು ನನ್ನನ್ನು ಕರೆಯಿಸಿಕೊಂಡಿರುವುದು ನಿನ್ನ ಮೂಲಕ ರಾಜಿ ಮಾಡಿಕೊಳ್ಳುವುದಕ್ಕಾಗಿಯೇ. ಆ ವಿಷಯವು ನನಗೆ ಚೆನ್ನಾಗಿ ತಿಳಿದಿದೆ. ನಿನ್ನಹಾಗೆ ನಾನು ವ್ಯವಹಾರಹೀನನಲ್ಲ. ನೀನೂ ಇನ್ಸ್ಪೆಕ್ಟರ್. ನಿನ್ನ ಹಾಗೆ ನಾನು ಇನ್ಸ್ಪೆಕ್ಟರ್. ಉದ್ಯೋಗ ಒಂದೇ ಆದರೂ ನಡವಳಿಕೆಗಳಲ್ಲಿ ಅಜಗಜಾಂತರ ವ್ಯತ್ಯಾಸವಿದೆ."

"ಹೌದು ! ನೀನು ಆನೆ ನಾನು ಆಡು. ವ್ಯತ್ಯಾಸವಿದ್ದೇ ಇದೆ. ಈಗ ಮುಖ್ಯ ವಿಷಯವೇನೆಂಬುದನ್ನು ತಿಳಿಸು ?"

"ಪುರುಷೋತ್ತಮನು ನಿನ್ನ ಮೂಲಕ ನನ್ನೊಡನೆ ರಾಜಿ ಮಾಡಿಕೊಳ್ಳುವುದಕ್ಕಾಗಿಯೇ ನನ್ನನ್ನು ಕರೆಯಿಸಿಕೊಂಡಿರುವನು. ನಿನಗೆ ತಿಳಿಯದೆ ಇದ್ದರೂ ನನಗೆ ತಿಳಿದಿದೆ. ಆದರೇ ! ನಾನು ರಾಜಿಯಾಗಲು ಒಪ್ಪುವುದಿಲ್ಲ. ನೀನು ಆತನ ಪರವಾಗಿ ನನಗೆ ಒತ್ತಾಯಪಡಿಸಬೇಡ. ಅದಕ್ಕಾಗಿಯೇ ನಿನಗೆ ಈಗಲೇ ಎಚ್ಚರಿಸಿರುವೆನು. ನೀನೇನಾದರೂ ಆ ವೇಳೆಯಲ್ಲಿ ರಾಜಿ ಮಾಡಲು ಪ್ರಯತ್ನಪಟ್ಟರೆ ಅವಮಾನಿತನಾಗುವೆ. ತಿಳಿದಿರು."

ಚಂದ್ರನಾಥನಿಗೆ ನಗು ಬಂದು ತಡೆಯಲಾರದೆ ಜೋರಾಗಿಯೇ ನಕ್ಕನು. ಆ ನಗುವು ಪ್ರದೀಪನನ್ನು ಅಪಹಾಸ್ಯ ಮಾಡಿದಂತಿತ್ತು.

"ಚಂದ್ರನಾಥ ! ಅಪಹಾಸ್ಯಕ್ಕಿದು ವೇಳೆಯಲ್ಲ. ನಿನಗೆ ಇನ್ನೂ ಅನುಭವವಿಲ್ಲ. ಹಾಗೆ ಅನುಭವ ಪಡೆಯಬೇಕಾದರೆ ನನ್ನ ಜೊತೆಯಲ್ಲಿ ಎಡೆಬಿಡದೆ ಹತ್ತು ವರ್ಷವಿರಬೇಕು. ಆಗ ಅನುಭವ ಪಡೆಯುವೆ. ಇಲ್ಲದೇಹೋದರೆ ನಿನ್ನ ಜೀವಮಾನವು ಇದೇ ರೀತಿ ಕೊನೆಗಾಣುತ್ತದೆ. ತಿಳಿದಿರು."

ಚಂದ್ರನಾಥನು ನಕ್ಕು—

"ಆದರೂ ಚಿಂತೆಯಿಲ್ಲ. ನೀನು ಮಾತ್ರ ಇದೇ ರೀತಿ ಕೀರ್ತಿ ಗಳಿಸು. ನಿನ್ನ ಕೀರ್ತಿ ಹಿಮಾಲಯ ಪರ್ವತದ ಗೌರಿಶಂಕರವನ್ನು ಮುಟ್ಟಲಿ. ಈಗ ಪುರುಷೋತ್ತಮನು ನಿನ್ನನ್ನು ಕರೆಯಿಸಿಕೊಂಡಿರುವುದು ನನ್ನ ಮೂಲಕ ರಾಜಿ ಮಾಡಿಕೊಳ್ಳುವುದಕ್ಕೆಂದು ನಿನ್ನ ಅಭಿಪ್ರಾಯವೇ ?" ಎಂದು ಕೇಳಿದನು.

"ಹೌದು ! ಸಂದೇಹಪಡಬೇಕಾದ ಕಾರಣವೇ ಇಲ್ಲ. ತಪ್ಪಿದರೆ ಮುಂದೆ ಮೋಸಪಡಿಸುವೆನೆಂದು ಹೇಳುವರು."

"ಮುಂದೆ ಮೋಸಪಡಿಸುವೆನೆಂದು ಹೇಳಿದರೆ ಒಪ್ಪಿಕೊಳ್ಳುವೆಯಾ ?"

"ಹಾಗೆ ಹೇಳಿದರೆ ಹಿಂದಿನಂತೆ ಮೋಸಹೋಗದೆ, ಅದಕ್ಕೊಂದು ಅವಧಿಯನ್ನು ಗೊತ್ತುಮಾಡುವೆನು. ಅಷ್ಟರಲ್ಲಿಯೇ ಅವರು ಅಂದು ನಡೆದ ಮಾತಿನ ಪ್ರಕಾರ ನನಗೆ ಮೋಸಪಡಿಸಬೇಕು, ತಪ್ಪಿದರೆ ರಾಜೀನಾಮೆ ಕೊಡಬೇಕು."

"ಒಂದು ವೇಳೆ ಅವರು ನಿನಗೆ ಮೋಸ ಪಡಿಸಿದರೆ ನೀನು ಪ್ರತಿಜ್ಞೆಯಂತೆ ನಡೆದುಕೊಳ್ಳುವೆಯಾ ?"

"ಅದರಲ್ಲಿ ಸಂದೇಹವೇನಿದೆ ? ಅದಕ್ಕೆ ತಯಾರಿರುವೆನು. ಆಡಿದ ಮಾತಿಗೆ ತಪ್ಪುವುದಿಲ್ಲ."

"ಒಂದುವೇಳೆ ಪುರುಷೋತ್ತಮನು ನಿನಗೆ ಮೋಸಪಡಿಸಿರುವೆನು ಎಂದು ಹೇಳಿದರೆ ?"

ಪ್ರದೀಪನ ಎದೆಯು ಧಸ್ಸೆಂದಿತು. ಮುಖವು ವಿವರ್ಣವಾಯಿತು. ಕೆಲಹೊತ್ತಿನಲ್ಲಿಯೇ ಮೊದಲಿನ ಸ್ಥಿತಿಯನ್ನು ತಾಳಿದನು.

"ಚಂದ್ರನಾಥ ! ಪುರುಷೋತ್ತಮನು ನಿನ್ನೊಡನೆ ಪ್ರದೀಪನಿಗೆ ಮೋಸಪಡಿಸಿರುವೆನೆಂದು ಹೇಳಿದನೇ ?"

"ಇಲ್ಲಾ! ಆ ರೀತಿ ಹೇಳಿದ್ದರೆ, ನಾನು ನಿನ್ನೊಡನೆ ಹೇಳದಿರುತ್ತಿದ್ದೆನೇ? ನಿನ್ನ ವಿಷಯವಾಗಿ ನನ್ನೊಡನೆ ಏನು ವಿಷಯವನ್ನೂ ತಿಳಿಸಲಿಲ್ಲ."

"ನೀನು ಏನಾದರೂ ಪ್ರಸ್ತಾಪ ಮಾಡಿದೆಯಾ ?"

"ಇಲ್ಲ."

"ಸರಿ! ಹಾಗಿದ್ದಮೇಲೆ ಅವರು ಇಲ್ಲಿಯವರೆವಿಗೆ ನನಗೆ ಮೋಸಪಡಿಸಿಲ್ಲ. ಮುಂದೆ ಮೋಸಪಡಿಸುವುದಕ್ಕೆ ಸಾಧ್ಯವಾಗುವುದೂ ಇಲ್ಲ. ಈಗ ರಾಜಿಮಾಡಿ ಕೊಳ್ಳುವುದಕ್ಕಾಗಿಯೇ ನನ್ನನ್ನು ಕರೆಯಿಸಿರುವನು. ಇಲ್ಲದೆಹೋದರೆ ಇದು ವರೆವಿಗೆ ಗಳಿಸಿದ ಕೀರ್ತಿಯೆಲ್ಲಾ ಅಳಿಸಿಹೋಗುವುದೆಂಬ ಭೀತಿಯಿದೆ. ಆದರೆ ನಾನು ರಾಜಿಯಾಗಲು ಒಪ್ಪುವುದಿಲ್ಲ. ಅವರು ರಾಜೀನಾಮೆ ಕೊಡಬೇಕು. ತಪ್ಪಿದರೆ ನಾನು ಅವರ ದಾಸನಾಗಬೇಕು. ಪ್ರತಿಜ್ಞೆ ಮಾಡಿದಮೇಲೆ ಪೂರ್ತಿ ಯಾಗಬೇಕು. ಮಧ್ಯದಲ್ಲಿಯೇ ಕೈಬಿಟ್ಟು ಉದಾಸೀನರಾಗುವ ಕಾರಣ ಬೇಡ."

"ಸರಿ! ನಿನ್ನ ಅಭಿಪ್ರಾಯದಂತೆಯೇ ಆಗಲಿ."

"ಆ ರಾಮನಾಥನು ಒಂದು ಮಾತನ್ನು ಹೇಳಿರುವನು. ನಿನಗೆ ನೆನ ಪಿರುವುದೇ ?"

"ನೆನಪಿರುವುದಾದರೂ ಅದೇನು ವಿಷಯವೆಂದು ಜ್ಞಾಪಕವಿಲ್ಲ. ನೀನೇ ಹೇಳು ?"

"ಆತನು ಆ ದಿನ, 'ನೀವು ಸೋತರೆ ನಿಮ್ಮ ಹೆಸರು ಇಲ್ಲಿಗೇ ಮುಳುಗಿ ಹೋದಂತೆಯೇ. ನಾವು ಸೋತರೆ ನಮ್ಮ ಕೀರ್ತಿಯನ್ನು ಬೆಳಗಿಸಲು ವಿಜಯ ಕೇಸರಿ, ಶೂರವಿಜಯರಿರುವರು. ನಾವು ರಾಜೀನಾಮೆಯನ್ನು ಕೊಡುತ್ತಲೇ ನಮ್ಮ ಕಾರ್ಯವನ್ನು ಅವರಿಬ್ಬರೂ ಮುಂದುವರಿಸಿಕೊಂಡು ಹೋಗುವರು. ಆದ್ದರಿಂದ ನಮಗೆ ಭಯವೆಂಬುದು ಲೇಶಮಾತ್ರವೂ ಇಲ್ಲ' ಎಂಬುದಾಗಿ ಹೇಳಿರುವನು. ಆ ವಾಕ್ಯವು ನನ್ನ ಹೃದಯವನ್ನು ದಹಿಸುತ್ತಲಿದೆ."

"ಆತನು ಹೇಳಿದಂತೆಯೇ ಅಕ್ಷರ ಸಮೇತ ಹೇಳಿದೆಯಲ್ಲ."

"ಇಷ್ಟುಮಾತ್ರವೇ ಅಲ್ಲ. ಆತನಾಡಿದ ಪ್ರತಿಯೊಂದು ವಿಷಯವೂ ನನಗೆ ನೆನಪಿನಲ್ಲಿದೆ. ವಾಕ್ಯಗಳ ಸಮೇತ ಬಾಯಿಪಾಠ ಮಾಡಿಕೊಂಡಿರು ವೆನು. ಅದೆಲ್ಲವನ್ನೂ ತೀರಿಸಿಕೊಳ್ಳುವ ಕಾಲ ಬಂದಿದೆ. ಅತ್ತೆಗೊಂದುಕಾಲ ಸೊಸೆಗೊಂದುಕಾಲ ಎಂದು ಹೇಳುವುದಿಲ್ಲವೇ ಹಾಗೆ. ಇದುವರೆವಿಗೆ ಅವರ ಯೋಗವು ನಡೆಯುತ್ತಿತ್ತು. ಈಗ ಆ ಯೋಗವು ನನಗೆ ಬಂದಿದೆ."

"ಸರಿ ! ಹಾಗಾದರೆ ಅವರು ರಾಜೀನಾಮೆ ಕೊಡಬೇಕೆನ್ನುವೆಯಾ ? "

"ಪುನಃ ಪುನಃ ಒತ್ತಾಯ ಮಾಡಿ ಕೇಳುವೆಯಲ್ಲ. ಅವರು ರಾಜೀ ನಾಮೆ ಕೊಟ್ಟನಂತರ ಅವರ ಮಕ್ಕಳಿಬ್ಬರು ಅವರ ಕಾರ್ಯವನ್ನು ನಿರ್ವಹಿಸಿ ಕೊಳ್ಳುವರು. ಅವರಿಗೂ ಬಿಡಲಾರೆ."

"ಏನು ಮಾಡುವೆ ? "

"ಇದೇ ರೀತಿ ಅವರನ್ನೂ ಸಹ ಯಾವುದಾದರೊಂದು ಪತ್ತೇದಾರಿಕೆ ಯಲ್ಲಿ ಪಂಥದಲ್ಲಿ ಸೋಲಿಸಿ, ಅವರೂ ಸಹ ನನಗೆ ತಲೆಬಾಗುವಂತೆ ಮಾಡು ವೆನು. ಆಗ ಅವರ ಕೀರ್ತಿಯು ಅಳಿಯುವುದೋ ? ಉಳಿಯುವುದೋ? ನೋಡುವೆನು."

"ಖಂಡಿತಾ ಆ ರೀತಿ ಮಾಡುವೆಯಾ ? "

"ನೀನೇ ನೋಡುತ್ತಿರು, ನಾನು ಏನು ಮಾಡುವೆನೆಂದು ನಾನಾರೆಂದು ಇನ್ನೂ ನಿನಗೆ ಸರಿಯಾಗಿ ತಿಳಿಯದು."

"ನೀನಾರೆಂದು ತಿಳಿದಿದೆ. ನಿನ್ನ ಯೋಗ್ಯತೆಯ ಮರ್ಮವು ಸರಿಯಾಗಿ ತಿಳಿಯದು."

"ನನ್ನ ಯೋಗ್ಯತೆಯ ವರೆವಿಗೆ ಬರಬೇಡ. ನಿನ್ನ ಯೋಗ್ಯತೆಯೇನೆಂದು ನನಗೆ ತಿಳಿದಿದೆ."

"ಇನ್ನು ನಿನ್ನೊಡನೆ ಮಾತನಾಡಿ ಹೊತ್ತು ಕಳೆಯುವುದರಿಂದ ಪ್ರಯೋ ಜನವಿಲ್ಲ. ಪುರುಷೋತ್ತಮನಲ್ಲಿಗೆ ಹೋಗೋಣ ನಡೆ. ಇಲ್ಲಿ ನಾವಿಬ್ಬರು ವಾಗ್ವಾದ ಮಾಡುವುದು ಬೇಡ."

"ನಡೆ ಹೋಗೋಣ. ನಿಮ್ಮೆಲ್ಲರ ಗರ್ವವು ಅಡಗುವುದಕ್ಕೆ ಹೆಚ್ಚು ವೇಳೆಯಿಲ್ಲ."

"ನಮ್ಮ ಗರ್ವವಡಗುವುದೋ, ನಿನ್ನ ಅಹಂಕಾರವಡಗುವುದೋ ಮುಂದೆ ತಿಳಿಯುತ್ತದೆ."

"ಮುಂದೆ ತಿಳಿಯುವುದೇನು ? ಈಗ ತಿಳಿದೇಹೋಗಿದೆ. ಮತ್ತೆ ಕಾಯ ಬೇಕಾದ ಪ್ರಮೇಯವೇ ಬೇಡ."

"ನಿನಗೆ ತಿಳಿದಿರಬಹುದಾದರೂ ನನಗೆ ತಿಳಿದಿಲ್ಲ."

"ಹಾಗಾದರೆ ತಿಳಿಯುತ್ತದೆ ನಡೆ."

ಚಂದ್ರನಾಥನು ಮರುಮಾತನಾಡದೆ ಪುರುಷೋತ್ತಮನಲ್ಲಿಗೆ ಹೋಗಲು ತಯಾರಾದನು.

ಪ್ರದೀಪನೂ ಸಹ ಎದ್ದು ನಿಂತನು.

ಇಬ್ಬರೂ ಪುರುಷೋತ್ತಮನ ಮನೆಗೆ ಹೊರಟರು. ಮಾರ್ಗದಲ್ಲಿ ಮಾತುಕತೆಯೇನೂ ನಡೆಯಲಿಲ್ಲ.

ಒಬ್ಬೊಬ್ಬರ ಮನದಲ್ಲಿ ಒಂದೊಂದು ಬಗೆಯ ಯೋಚನೆಯು ಅಡಗಿಕೊಂಡು ಕುಳಿತಿದ್ದ ಪ್ರಯುಕ್ತ ಮಾತನಾಡಲು ಅವಕಾಶವಿಲ್ಲದಂತಾಗಿತ್ತು.

ಇಷ್ಟು ದಿನಗಳಾದರೂ ಪತ್ತೇದಾರರು ಏಕೆ ಮೌನರಾಗಿ ಕುಳಿತರೆಂಬುದೇ ಚಂದ್ರನಾಥನ ಮುಖ್ಯ ಯೋಚನೆಯಾಗಿತ್ತು.

## ೧೫

ಪುರುಷೋತ್ತಮನು ರಾಮನಾಥನೊಡನೆ ವಿನೋದವಾಗಿ ಮಾತನಾಡುತ್ತಾ ಕುಳಿತಿರಲು, ಇನ್‌ಸ್ಪೆಕ್ಟರಿಬ್ಬರು ಆಗಮಿಸಿದರು.

ಪುರುಷೋತ್ತಮನು ನಸುನಗುತ್ತಾ ಇಬ್ಬರಿಗೂ ಸ್ವಾಗತಿಸಿ, ಕುಳಿತುಕೊಳ್ಳಲು ಕುರ್ಚಿಗಳನ್ನು ತೋರಿಸಿದನು.

ಚಂದ್ರನಾಥನು ಮುಗುಳ್ನಕ್ಕು ಕುರ್ಚಿಯಲ್ಲಿ ಕುಳಿತನು. ಪ್ರದೀಪನು ಕೆಂಗಣ್ಣುಗಳಿಂದ ರಾಮನಾಥನ ಮುಖವನ್ನು ನೋಡುತ್ತಾ ಕುಳಿತನು.

ಏನು ವಿಷಯವೆಂದು ಪುರುಷೋತ್ತಮನು ಚಂದ್ರನಾಥನಿಗೆ ಕೇಳಲು, ಯಾವ ವಿಷಯವನ್ನೂ ಮುಚ್ಚಿಡಬಾರದೆಂಬ ಅಭಿಪ್ರಾಯವುಳ್ಳವನಾಗಿ ಚಂದ್ರನಾಥನು, ಪ್ರದೀಪನಿಗೂ ತನಗೂ ನಡೆದ ಸಂಭಾಷಣೆಯ ವಿವರವನ್ನೆಲ್ಲಾ ಹೇಳಿದನು.

ರಾಮನಾಥನಿಗೆ ಬಲುಕೋಪ ಬಂದಿತು. ಈಗಲೇ ಈ ಅವಿವೇಕಿಗೆ ತಕ್ಕ ಪ್ರಾಯಶ್ಚಿತ್ತ ಮಾಡದೆ ಬಿಡಬಾರದೆಂದುಕೊಂಡನು.

ಪುರುಷೋತ್ತಮನಿಗೆ ಸಿಟ್ಟು ಬಂದಿತಾದರೂ ಅದನ್ನು ತನ್ನಲ್ಲಿಯೇ ಅಡಗಿಸಿಕೊಂಡು, ಸಹಜಸ್ಥಿತಿಯಲ್ಲಿಯೇ ಕುಳಿತಿದ್ದನು.

ಇವರು ಪಂಥದಲ್ಲಿ ಸೋತರೆಂದೇ ತಿಳಿದು ಪ್ರದೀಪನು ತನ್ನ ಮನದಲ್ಲಿಯೇ ಆನಂದಗೊಂಡನು.

ಚಂದ್ರನಾಥನು ಕೆಲಹೊತ್ತು ಮೌನವಾಗಿದ್ದು ಬಳಿಕ—

"ಪತ್ತೇದಾರರೇ! ನಿಮ್ಮ ಮಾತಿನಂತೆ ಪ್ರದೀಪನನ್ನು ಕರೆಯಿಸಿಕೊಂಡದ್ದಾಯಿತು. ಈಗ ಏನು ಮಾಡಬೇಕೆಂಬುದನ್ನು ಹೇಳಿ" ಎಂದನು.

ಪುರುಷೋತ್ತಮನು ಸಹಜಸ್ಥಿತಿಯಲ್ಲಿಯೇ—

"ನಾನು ಹೇಳಬೇಕಾದ್ದನ್ನೆಲ್ಲಾ ಇವರೇ ಹೇಳಿರುವರಲ್ಲ. ಇನ್ನು ನಾನು ಹೇಳುವುದೇನಿದೆ ? " ಎಂದನು.

ಚಂದ್ರನಾಥನು ಬೆರಗಾದನು. ಪುರುಷೋತ್ತಮನು ಆ ರೀತಿ ಹೇಳುವ ನೆಂದು ಆತನು ತನ್ನ ಕನಸು ಮನಸಿನಲ್ಲಿಯೂ ತಿಳಿದಿರಲಿಲ್ಲ.

ಪ್ರದೀಪನಿಗೆ ಅತ್ಯಾನಂದವಾಯಿತು. ಇನ್ನು ತನ್ನ ಪ್ರತಿಜ್ಞೆಯು ಜಯ ವಾಯಿತೆಂದೇ ತಿಳಿದು, ಚಂದ್ರನಾಥನ ಮುಖವನ್ನು ಮುಗುಳ್ನಕ್ಕು ನೋಡಿ ದನು.

ಚಂದ್ರನಾಥನು ಮಾತನಾಡುವುದಕ್ಕೆಂದು ಬಾಯಿಬಿಡುವ ಮೊದಲೇ ಪ್ರದೀಪನು—

"ಪತ್ತೇದಾರರೇ ! ನೀವು ಪಂಥದಲ್ಲಿ ಸೋತಹಾಗೆಯೇ ಆಯಿತು. ಇನ್ನು ಮುಂದೆ ಏನು ಮಾಡಬೇಕೆಂಬುದರ ಬಗ್ಗೆ ನಾನು ಹೇಳಬೇಕಾದ ಪ್ರಮೇಯವಿಲ್ಲ" ಎಂದು ಗಂಭೀರವಾಕ್ಕಿನಿಂದ ನುಡಿದನು.

ರಾಮನಾಥನು ಸಿಟ್ಟಿನಿಂದ ಹಲ್ಲುಕಡಿಯುತ್ತಾ ಎದ್ದುನಿಂತನು. ಪುರು ಷೋತ್ತಮನು ಆತನಿಗೆ ಕುಳಿತುಕೊಳ್ಳುವಂತೆ ಸೂಚಿಸಲು, ಅವನು ತುಟಿ ಎರಡು ಮಾಡದೆ, ಪ್ರದೀಪನ ಮುಖವನ್ನು ನೋಡುತ್ತಾ ಕುಳಿತನು.

ಪ್ರದೀಪನು ರಾಮನಾಥನ ಕೋಪಕ್ಕೆ ಮಣಿಯುವ ಹಾಗಿರಲಿಲ್ಲ. ಆತನು ಏನು ಮಾತನಾಡಿದರೂ ಸರಿ, ಆ ಮಾತಿಗೆ ಪ್ರತ್ಯುತ್ತರವೀಯಲು ತಯಾರಾಗಿಯೇ ಇದ್ದನು. ಒಂದುವೇಳೆ ಹೊಡೆದಾಟವಾಡುವುದಕ್ಕೆ ಬಂದಿ ದ್ದರೂ ಸರಿ, ಅದಕ್ಕೂ ಸಹ ಸಿದ್ಧನಾಗಿದ್ದನು.

ರಾಮನಾಥನು ಕುಳಿತನಂತರ ಪುರುಷೋತ್ತಮನು ಪ್ರದೀಪನಿಗೆ—

"ನಾವು ಪಂಥದಲ್ಲಿ ಸೋತೆವೆಂದು ನಿಮ್ಮ ಅಭಿಪ್ರಾಯವೇ ? " ಎಂದು ಕೇಳಿದನು.

"ಹೌದು."

"ಈಗ ಏನು ಮಾಡಬೇಕೆಂಬುದನ್ನು ನೀವೇ ಹೇಳಿ. ನಿಮ್ಮ ಬಾಯಿಂ ದಲೇ ಮುಂದಿನ ಕಾರ್ಯಚಟುವಟಿಕೆಯನ್ನು ಅರಿಯೋಣ."

"ಪತ್ತೇದಾರರೇ ! ನಿಮ್ಮ ಈ ಗಿಲೀಟು ಮಾತು ನನ್ನಲ್ಲಿ ನಡೆಯಲಾರದು. ನಿಮ್ಮ ಸವಿನಯ ಮಾತಿಗೆ ನಾನು ಮನಸೋಲುವುದಿಲ್ಲ. ಮುಂದಿನ ಕಾರ್ಯ

ಚಟುವಟಿಕೆಯಿಂದಾಗಲೇ ನಿಮ್ಮ ಮನೋಭಿಪ್ರಾಯವೇನೆಂದು ನನಗೆ ತಿಳಿಯಿತು."

"ಅಷ್ಟರಮಟ್ಟಿನ ಊಹಾಜ್ಞಾನ ನೈಪುಣ್ಯತೆಯಿರುವುದೇ ?"

"ಈ ಸಣ್ಣ ವಿಷಯವನ್ನು ಅರಿತುಕೊಳ್ಳದೆ ಹೋದಮೇಲೆ ನಾನು ಇನ್ಸ್ಪೆಕ್ಟರ್ ಪದವಿಯಲ್ಲಿದ್ದು ಪ್ರಯೋಜನವೇನು? ಸಣ್ಣಸಣ್ಣ ವಿಷಯಗಳಿಗೆಲ್ಲಾ ನಿಮ್ಮಲ್ಲಿ ಸಲಹೆ ಕೇಳುವ ಚಂದ್ರನಾಥನೆಂದು ತಿಳಿದಿರಾ ?"

"ಸರಿ, ಸರಿ! ನೀವು ಎಲ್ಲಾ ವಿಷಯಗಳಲ್ಲಿಯೂ ಮೇಲಾದವರೇ ಸರಿ. ನನ್ನ ಮನೋಭಿಪ್ರಾಯದ ಅಂತರಾರ್ಥವೇನು ಹೇಳಿ. ಕೇಳುವೆನು."

"ನಿಮ್ಮ ಮನೋಭಿಪ್ರಾಯವೇನೆಂದರೆ :— ಪ್ರದೀಪನಿಗೆ ಮೋಸಪಡಿಸಲು ಸಾಧ್ಯವಾಗಲಿಲ್ಲ. ಮುಂದೆ ಪ್ರಯತ್ನಪಟ್ಟರೂ ಸಾಧ್ಯವಾಗದು. ಈ ಜನ್ಮದಲ್ಲಿಯೇ ಮೋಸಪಡಿಸಲು ಸಾಧ್ಯವಾಗುವುದೋ ಇಲ್ಲವೋ ಅದೂ ಹೇಳಲಾಗುವುದಿಲ್ಲ. ಅನ್ಯಾಯವಾಗಿ ಪ್ರದೀಪನನ್ನು ಕೆಣಕಿ ಅವಮಾನವಾಗಬೇಕಾಯಿತು. ಈಗ ರಾಜೀನಾಮೆ ಕೊಟ್ಟರೆ ಇದುವರೆವಿಗೆ ಗಳಿಸಿದ ಕೀರ್ತಿಯೆಲ್ಲಾ ಅಳಿಸಿಹೋಗಿ, ಮುಂದೆ ನಗರದಲ್ಲಿ ತಲೆಯೆತ್ತಿ ತಿರುಗುವುದು ಕಷ್ಟವಾಗುತ್ತದೆ. ಆದ್ದರಿಂದ ಪ್ರದೀಪನನ್ನು ಯಾವರೀತಿಯಿಂದಲಾದರೂ ಒಡಂಬಡಿಸಿ ರಾಜಿ ಮಾಡಿಕೊಂಡರೆ ನಮ್ಮ ಮರ್ಯಾದೆ ಉಳಿಯುತ್ತದೆ. ಇಲ್ಲದೆ ಹೋದರೆ ನಮ್ಮ ಮರ್ಯಾದೆಗೆ ಕಳಂಕವೊದಗುತ್ತದೆ. ಆತನನ್ನು ಕೆಣಕಿದುದು ಹಸಿದ ಹೆಬ್ಬುಲಿಯನ್ನು ಕುರಿಮರಿಯು ಕೆಣಕಿದಂತಾಯಿತು. ಇನ್ನು ಪ್ರದೀಪನಲ್ಲಿ ಶರಣಾಗತರಾಗುವ ಮಾರ್ಗವೊಂದೇ ಉಳಿದಿದೆ' ಎಂಬುದಾಗಿ ಯೋಚಿಸಿಕೊಂಡಿರುವಿರಿ. ಪತ್ತೇದಾರರೇ! ನನ್ನ ಉದ್ದೇಶವನ್ನು ಹೇಳುವೆನು ಕೇಳಿ ............"

ಪ್ರದೀಪನು ಮಾತನಾಡುವ ಮೊದಲೇ ಪುರುಷೋತ್ತಮನು—

"ಅಷ್ಟು ಮಾತ್ರವಲ್ಲದೆ ನಿಮ್ಮ ಮೆದುಳಿಗೆ ಬೇರೆ ಏನು ಯೋಚನೆಯೂ ಹೊಳೆಯಲಿಲ್ಲವೇ ?" ಎಂದು ಕೇಳಿದನು.

ರಾಮನಾಥನು ಸಿಟ್ಟಿನಿಂದ ಹಲ್ಲು ಕಡಿಯುತ್ತಿದ್ದನು. ಅವನ ಕಣ್ಣುಗಳು ಆಗಲೇ ಕೆಂಪುವರ್ಣವನ್ನು ತಾಳಿದ್ದುವು.

ಚಂದ್ರನಾಥನೂ ಸಹ ಅವರಿಬ್ಬರ ಸಂಭಾಷಣೆಯನ್ನು ಕೇಳುತ್ತಾ ಚಿತ್ರ ಪ್ರತಿಮೆಯಂತೆ ಕುಳಿತಿದ್ದನು.

ಪುರುಷೋತ್ತಮನ ಪ್ರಶ್ನೆಗೆ ಪ್ರದೀಪನು—

"ಇನ್ನೂ ಎಷ್ಟೋ ಯೋಚನೆ ಹೊಳೆದಿದೆ" ಎಂದು ಉತ್ತರವಿತ್ತನು.

"ಅದನ್ನೂ ಹೇಳಿಬಿಡಿ. ಅನಂತರ ನಿಮ್ಮ ಉದ್ದೇಶವನ್ನು ಹೇಳುವಿರಂತೆ."

"ನೀವು ಚಂದ್ರನಾಥನ ಮೂಲಕ ಇಲ್ಲಿಗೆ ನನ್ನನ್ನು ಕರೆಯಿಸಿಕೊಂಡಿರುವುದು ರಾಜಿ ಮಾಡಿಕೊಳ್ಳುವುದಕ್ಕಾಗಿಯೇ. ತಪ್ಪಿದರೆ ಮೋಸ ಪಡಿಸಲು ಇಷ್ಟು ದಿನಗಳಿಂದು ಅವಧಿಯನ್ನು ಗೊತ್ತುಮಾಡಿಕೊಳ್ಳುವುದಕ್ಕಾಗಿ. ನನಗೆಲ್ಲಾ ತಿಳಿದಿದೆ."

"ಸರಿ, ತಿಳಿಯಿತು. ಇನ್ನು ನಿಮ್ಮ ಅಭಿಪ್ರಾಯವನ್ನು ಹೇಳಿ."

"ನಾನು ರಾಜಿಯಾಗಲು ಒಪ್ಪುವುದಿಲ್ಲ. ಅಂದು ನಿಮ್ಮ ಮಿತ್ರರಾಡಿದ ಮಾತು ನನ್ನ ಹೃದಯವನ್ನು ದಹಿಸುತ್ತಲಿದೆ. ಆ ಪ್ರಯುಕ್ತ ಏನಾದರೂ ಸರಿ, ನಾನು ರಾಜಿಯಾಗಲಾರೆ."

"ಅವಧಿಯನ್ನೂ ಕೊಡುವುದಿಲ್ಲವೇ ? "

"ಸಾಧ್ಯವಿಲ್ಲ. ಹಾಗೆ ಬೇಕಾದರೆ ಎಂಟು ದಿನಗಳ ಅವಧಿಯನ್ನು ಕೊಡುವೆನು. ಅಷ್ಟರಲ್ಲಿ ಅಂದು ಪಂಥಮಾಡಿದ ರೀತಿ ಮೋಸಪಡಿಸಬೇಕು. ಎಂಟು ದಿನಗಳಿಗಿಂತ ಹೆಚ್ಚು ದಿನಗಳು ಅವಧಿ ಕೊಡಲು ಸಾಧ್ಯವಿಲ್ಲ."

"ಹಾಗಾದರೆ ಈಗ ನಮಗೆ ರಾಜೀನಾಮೆ ಕೊಡಬೇಕೆಂದು ಸೂಚಿಸುವಿರಾ?"

"ಹೌದು! ಆಡಿದ ಮಾತಿಗೆ ತಪ್ಪದೆ ನಡೆಯಬೇಕು."

ಕೋಪದಿಂದ ತಳಮಳಿಸುತ್ತಿದ್ದ ರಾಮನಾಥನಿಂದ ಪುರುಷೋತ್ತಮನ ಶಾಂತವಚನಗಳನ್ನೂ, ಪ್ರದೀಪನ ದುರಹಂಕಾರದ ಮಾತುಗಳನ್ನೂ ಕೇಳಲಾಗಲಿಲ್ಲ.

ಪುರುಷೋತ್ತಮನು ಮಾತನಾಡುವ ಮೊದಲೇ—

"ಒಂದುವೇಳೆ ನಾವು ನಿನಗೆ ಮೋಸಪಡಿಸಿದ್ದರೆ ನೀನು ನಮಗೆ ದಾಸನಾಗುತ್ತಿದ್ದೆಯಾ ? " ಎಂದು ಕೇಳಿದನು.

"ಸಂದೇಹವೇಕೆ? ಆಡಿದ ಮಾತಿಗೆ ತಪ್ಪುತ್ತಿರಲಿಲ್ಲ. ಆ ರೀತಿ ಮಾತು ಕೊಟ್ಟು ತಪ್ಪುವುದು ನನ್ನ ಈ ಜನ್ಮದಲ್ಲಿಯೇ ಸಾಧ್ಯವಿಲ್ಲ."

"ಈ ಮಾತು ಖಂಡಿತವೇ ?"

"ಇದರಲ್ಲಿ ಸಂದೇಹವೇನಿದೆ? ಮಾತು ಕೊಟ್ಟು ತಪ್ಪುವವನು ಪ್ರದೀಪ ನಲ್ಲ. ಈಗಲೂ ಸಹ ಹೇಳಬಹುದು. ನನಗೆ ಆ ರೀತಿ ಮೋಸಪಡಿಸಿದ್ದರೆ ಇಂದಿನಿಂದಲೇ ನಿಮ್ಮ ದಾಸನಾಗುವೆನು. ನನ್ನ ಕಾರ್ಯಕ್ಕೆ ಇಲ್ಲಿಂದಲೇ ರಾಜೀನಾಮೆ ಬರೆದು ಕಳುಹುವೆನು."

"ಸರಿ, ಹಾಗಿದ್ದಮೇಲೆ ನೀನು ಇಂದಿನಿಂದಲೇ—ಈಗಿನಿಂದಲೇ ನಮ್ಮ ದಾಸ. ನಿನ್ನ ಕೆಲಸಕ್ಕೆ ರಾಜೀನಾಮೆಯನ್ನು ಬರೆದು ಕಳುಹಿಡು."

ಪ್ರದೀಪನು ಬೆರಗಾದನು. ಚಂದ್ರನಾಥನು ನಿರ್ವಿಣ್ಣವದನನಾದನು. ಪುರುಷೋತ್ತಮನು ಮುಗುಳುನಕ್ಕನು. ರಾಮನಾಥನು ಕೆಂಗಣ್ಣುಗಳಿಂದ ಪ್ರದೀಪನನ್ನೇ ನೋಡುತ್ತಿದ್ದನು.

ಪ್ರದೀಪನು ತನ್ನ ನಾಲಿಗೆಯಿಂದ ತುಟಿಗಳನ್ನು ಸವರಿಕೊಳ್ಳುತ್ತಾ ಪುರು ಷೋತ್ತಮನ ಮುಖವನ್ನು ನೋಡಿ—

"ಪತ್ತೇದಾರರೇ! ಇದೇನು ಅಸಂಬದ್ಧವಾಕ್ಯಗಳು. ನಾನೇಕೆ ನಿಮ್ಮ ದಾಸನಾಗಬೇಕು ?" ಎಂದು ಕೇಳಿದನು.

ಪುರುಷೋತ್ತಮನಿಗೆ ಮಾತನಾಡಲು ಅವಕಾಶವೀಯದೆ ರಾಮ ನಾಥನು—

"ಪುರುಷೋತ್ತಮನೊಡನೆ ಏಕೆ ಮಾತನಾಡುವೆ? ನನ್ನೊಡನೆ ಮಾತ ನಾಡು. ಯಾರು ಅಸಂಬದ್ಧ ವಾಕ್ಯಗಳನ್ನು ಆಡುತ್ತಿರುವವರು ? ಇದುವರೆ ವಿಗೆ ಚಂಡಪ್ರಚಂಡನಂತೆ ನೀನೇ ಬಾಯಿಗೆ ಬಂದಹಾಗೆ ಮಾತನಾಡಿರುವೆ. ನಾನೇಕೆ ನಿಮ್ಮ ದಾಸನಾಗಬೇಕೆಂದು ಕೇಳುವೆಯಾ? ಪಂಥದಲ್ಲಿ ಸೋತ ಪ್ರಯುಕ್ತ ದಾಸನಾಗಬೇಕು........ಹ್ಞೂ! ಇನ್ನು ತಡವೇಕೆ? ಕಾಗದ ಪೆನ್ನನ್ನು ತೆಗೆದುಕೊಂಡು ರಾಜೀನಾಮೆಯನ್ನು ಬರೆ. ನಮಗೂ ಒಬ್ಬ ದಾಸನು ಬೇಕಾ ಗಿತ್ತು. ಸಂಬಳವಿಲ್ಲದೆ ನೀನು ಸಿಕ್ಕಿರುವಾಗ ಬೇರೆ ಇನ್ಯಾರು ಬೇಕು ?" ಎಂದು ಘರ್ಜಿಸಿದನು.

ಬಿಸಿಯಾಗಿದ್ದ ಪ್ರದೀಪನ ವೈರಕ್ತವು ಆ ಒಂದು ಕ್ಷಣದಲ್ಲಿ ಆರಿ ಮಂಜಿನ ಗೆಡ್ಡೆಯಂತಾಯಿತು. 'ಇವರು ತಮ್ಮ ಮಾತಿನಂತೆ ಪಂಥದಲ್ಲಿ ಗೆದ್ದಿರಬಹುದೇ?'

ಹೇಗೆಂಬ ಯೋಚನೆಯು ಅವನ ಮನಕ್ಕೆ ಹೊಳೆಯಿತು. ಆಗ ಗಿರೀಶ, ಕೆಂಚರು ಅವನಿಗೆ ಮೋಸಪಡಿಸಿದ ಘಟನೆಯು ಹೊಳೆದು, ಅವರಿಬ್ಬರ ಮುಖಗಳನ್ನು ಎವೆಯಿಕ್ಕದೆ ನೋಡಿದನು.

ಅವರ ಮುಖಗಳಿಗೂ, ಇವರ ಮುಖಗಳಿಗೂ ವ್ಯತ್ಯಾಸವಿತ್ತು. ಅದನ್ನು ಕಂಡು, 'ಛೀ! ಇವರು ಅವರಲ್ಲ. ಅವರೇ ಬೇರೆ. ನನಗಷ್ಟು ತಿಳಿಯದೇ?' ಎಂಬುದಾಗಿಯೂ ಯೋಚಿಸಿಕೊಂಡನು.

ಚಂದ್ರನಾಥನು ರಾಮನಾಥನ ಗರ್ಜನೆಯ ಮಾತಿಗೆ ಬೆರಗಾಗಿ ಇವರು ಪ್ರದೀಪನಿಗೆ ಮೋಸಪಡಿಸಿಂಬಹುದೆಂದೂ, ಆ ಘಟನೆಯ ಮರ್ಮವು ಈತನಿಗೆ ತಿಳಿಯದೆಂದೂ, ಇವನಿಗೆ ತಿಳಿಯದಂತೆ ಇವನಿಗೇ ಮೋಸಪಡಿಸಿರಬೇಕಾದರೆ ಪತ್ತೇದಾರರ ಅಗೋಚರ ಕಾರ್ಯವು ಅತ್ಯದ್ಭುತವಾಗಿದೆಯೆಂದೂ ಯೋಚಿಸಿಕೊಂಡು, ಮುಂದೆ ಏನು ನಡೆಯುವುದೆಂಬುದನ್ನು ಕೇಳುವ ಕುತೂಹಲವುಳ್ಳವನಾದನು.

ಪ್ರದೀಪನು ರಾಮನಾಥನ ಕಡೆಯೇ ನೋಡುತ್ತಾ—

"ಕೊಂಚ ಮರ್ಯಾದೆಯಿಂದ ಮಾತನಾಡಿ. ಏಕವಚನದಲ್ಲಿಯೇ ಮಾತನಾಡುವಿರಲ್ಲ" ಎಂದನು.

ರಾಮನಾಥನು ಅವನ ಮಾತಿಗೆ ಮನ್ನಣೆಯಿಾಯಲಿಲ್ಲ. ಸಿಟ್ಟಿನಿಂದಲೇ—

"ನಿನಗೆ ಮರ್ಯಾದೆ ಬೇಕೆ? ಮರ್ಯಾದೆ ಬೇಕಿದ್ದರೆ ನೀನೀರೀತಿ ಮಾತನಾಡುತ್ತಿರಲಿಲ್ಲ. ಇನ್ನು ನೀನು ನಮ್ಮ ದಾಸನಾದಮೇಲೆ ನಿನಗೆ ಮರ್ಯಾದೆಯೇನು ತೋರಿಸಬೇಕು? ದಾಸನಾದವನನ್ನು ಎಲ್ಲಿಟ್ಟಿರಬೇಕೋ ಅಲ್ಲಿಯೇ ಇಟ್ಟಿರಬೇಕು. ನೀನು ಕುರ್ಚಿಯಲ್ಲಿ ಕುಳಿತುಕೊಳ್ಳಲೂ ಸಹ ಯೋಗ್ಯನಲ್ಲ" ಎಂದನು.

ರಾಮನಾಥನ ಎದುರಿಗೆ ಪ್ರತಿಯಾಗಿ ನಿಂತು ವರ್ತಿಸಬೇಕೆಂದು ಯೋಚಿಸಿಕೊಂಡಿದ್ದ ಪ್ರದೀಪನ ಯೋಚನೆಯೆಲ್ಲಾ ಕನಸಿನಲ್ಲಿ ಕಂಡ ಗಾಳಿಗೋಪುರದಂತಾಯಿತು. ಆತನ ಎದುರಿಗೆ ಸಿಟ್ಟಿನಿಂದ ಒಂದು ಮಾತನ್ನೂ ಆಡುವಹಾಗಿಲ್ಲ.

"ಹಾಗಾದರೆ ನೀವು ನನ್ನನ್ನು ಪಂಥದಲ್ಲಿ ಸೋಲಿಸಿರುವಿರಾ?"

—ಎಂದು ಪ್ರದೀಪನು ಕೇಳಲು, ರಾಮನಾಥನು—

"ಸೋಲಿಸಿ ಎಷ್ಟೋ ಕಾಲವಾಯಿತು" ಎಂದನು.

ಪ್ರದೀಪನ ನಾಲಿಗೆ ಒಣಗಿಹೋಯಿತು. ಮಾತನಾಡಲು ತುಟಿಗಳು ಚಲಿಸದಂತಾದುವು.

ಚಂದ್ರನಾಥನೂ ಸಹ ಆಶ್ಚರ್ಯಚಕಿತನಾಗಿ ಪ್ರದೀಪನ ಮುಖವನ್ನು ನೋಡಿ ನಸುನಕ್ಕನು.

'ಗಿರೀಶ, ಕೆಂಚರ ವೇಷದಲ್ಲಿ ಇವರೇ ಮೋಸಪಡಿಸಿರಬಹುದೇ? ಅಥವಾ ಅವರು ಮೋಸಪಡಿಸಿ ಪರಾರಿಯಾಗುವಾಗ ಇವರು ಅವರನ್ನು ಹಿಡಿದು, ಅವರಿಬ್ಬರನ್ನೂ ಎಲ್ಲಿಯೋ ಅಡಗಿಸಿ, ತಾವೇ ಆ ಕಾರ್ಯ ಮಾಡಿದೆವೆಂದು ಹೇಳಿರಬಹುದೇ? ಇದ್ದರೂ ಇರಬಹುದು. ಅವರ ವೇಷದಲ್ಲಿ ಇವರು ನನಗೆ ಮೋಸಪಡಿಸಲು ಸಾಧ್ಯವಾಗದು. ಆದ್ದರಿಂದ ಅವರನ್ನು ಎಲ್ಲಿಯೋ ಒಂದು ಕಡೆ ಬಚ್ಚಿಟ್ಟಿರಬಹುದು."

ಎಂಬೀರೀತಿಯಾಗಿ ಪ್ರದೀಪನು ಯೋಚಿಸಿಕೊಂಡನಾದರೂ, ಕೆಂಚನ ವಿಷಯದಲ್ಲಿ ಮಾತ್ರ ಸಂದೇಹವುಳ್ಳವನೇ ಆದನು.

"ಸರಿ! ನನಗೆ ಮೋಸಪಡಿಸಿದಿರೆಂದು ಒಪ್ಪಿಕೊಳ್ಳುವೆನು. ಹೇಗೆ? ಎಲ್ಲಿ? ಯಾವಾಗ ಮೋಸಪಡಿಸಿದಿರೆಂಬುದನ್ನು ವಿವರವಾಗಿ ಆಧಾರಸಹಿತ ಹೇಳಿ. ಆಗ ನಾನು ನಂಬುವೆನು."

—ಎಂದು ಪ್ರದೀಪನು ಹೇಳಲು, ರಾಮನಾಥನು—

"ಅಷ್ಟು ಮಾತ್ರವೇ? ಪ್ರತಿಯೊಂದು ಕಾರ್ಯಕ್ಕೂ ಆಧಾರವಿದೆ. ನೀನು ಆ ವಿಷಯವಾಗಿ ಯೋಚಿಸಿ ತಲೆ ಕೆಡಿಸಿಕೊಳ್ಳಬೇಕಾದ ಪ್ರಮೇಯವೇ ಬೇಡ" ಎಂದು ನುಡಿದನು.

ಚಂದ್ರನಾಥನು ಪ್ರದೀಪನ ಮುಖವನ್ನು ನೋಡಿ ನಕ್ಕನು. ಪ್ರದೀಪನಿಗೆ ಅವಮಾನವಾದಂತಾಯಿತು.

"ಪ್ರತಿಯೊಂದು ಕಾರ್ಯಕ್ಕೂ ಆಧಾರವಿರುವುದೇ?"

—ಎಂದು ಪ್ರದೀಪನು ಕೇಳಲು, ರಾಮನಾಥನು—

"ಇರುವುದು" ಎಂದನು.

ಪ್ರದೀಪನಿಗೆ ತಲೆಯೆಲ್ಲಾ ಸುತ್ತಿದಂತಾಗಿ, ಸುತ್ತಮುತ್ತಲಿನ ವಸುಗಳೆಲ್ಲಾ ಮಂಜಿನ ಮುಸುಕಿನಲ್ಲಿ ಕಂಡ ವಸ್ತುವಿನಂತೆ ತೋರಿತು.

ತನಗೆ ಇವರು ನಿಜವಾಗಿಯೂ ಮೋಸಪಡಿಸಿರುವರು. ತಾನಿನ್ನು ಇವರಿಗೆ ದಾಸನಾಗಿ ಬದುಕುವ ಪರಿಸ್ಥಿತಿಯೊದಗಿತೇ? ಎಂದು ಮರುಗಿದನು.

ಇವನ ಗರ್ವವನ್ನು ಸಂಪೂರ್ಣವಾಗಿ ಅಡಗಿಸದೆ ಬಿಡಬಾರದೆಂದು ರಾಮನಾಥನು ದೃಢಮನಸ್ಸಿನಿಂದ ಕುಳಿತಿದ್ದನು.

ಪತ್ತೇದಾರರು ಇವನಿಗೆ ಮೋಸಪಡಿಸಿರುವರೆಂಬುದರಲ್ಲಿ ಸಂದೇಹವಿಲ್ಲ. ಈಗ ಈತನ ಮರ್ಯಾದೆ ಕಳೆಯದೆ ಬಿಡಬಾರದೆಂದು ಚಂದ್ರನಾಥನು ಭಾವಿಸಿಕೊಂಡು ತಟಸ್ತನಾಗಿಯೇ ಕುಳಿತಿದ್ದನು.

ಅವರೆವಿಗೆ ಮೌನವಾಗಿ ಕುಳಿತಿದ್ದ ಪುರುಷೋತ್ತಮನು ನಸುನಗುತ್ತಾ, ಗಿರೀಶ ಮತ್ತು ಕೆಂಚನ ವೇಷದಲ್ಲಿ ತಾವೇ ಮೋಸಪಡಿಸಿದುದೆಂದು ಹೇಳಲು, ಪ್ರದೀಪನು ದಿಗ್ಭ್ರಾಂತನಾದನು. ಅವನ ಬಾಯಿಂದ ಮಾತುಗಳೇ ಹೊರಡಲಿಲ್ಲ.

ಅವನ ತಲೆಯಮೇಲೆ ಆಕಾಶವೇ ಕಳಚಿಬಿದ್ದಂತಾಯಿತು.

೧೬

ಪುರುಷೋತ್ತಮನು ಗಿರೀಶ, ಕೆಂಚನ ಹೆಸರನ್ನು ಹೇಳಿ ತಾವೇ ಅವ ರೆಂದು ಹೇಳುತ್ತಲೇ ಪ್ರದೀಪನ ಪ್ರಾಣವೇ ಹಾರಿಹೋದಂತಾಯಿತು.

ಪ್ರದೀಪನ ಬಾಯೊಣಗಿ ಮಾತನಾಡಲು ನಾಲಿಗೆ ಹೊರಳದ ಪ್ರಯುಕ್ತ ಮೌನನಾಗಿ ಕುಳಿತನು. ಆತನು ಮಾತನಾಡದ ಪ್ರಯುಕ್ತ ಉಳಿದವರೂ ತಾಟಸ್ಥ್ಯ ಭಾವವನ್ನು ವಹಿಸಿದರು.

ನಿಶ್ಶಬ್ಧತೆಯು ತಾನೇತಾನಾಗಿ ನೆಲೆಸಿತು.

ಪ್ರದೀಪನ ಮನದಲ್ಲಿ ಬಗೆಬಗೆಯ ಯೋಚನೆಗಳು ತರಂಗತರಂಗವಾಗಿ ಉದ್ಭವಿಸಿ ಹರಿಯಲಾರಂಭಿಸಿತು.

'ಪುರುಷೋತ್ತಮನು ತಿಳಿಸಿದಂದೆ ಇವರಿಬ್ಬರೂ ಸೇರಿಕೊಂಡು ಗಿರೀಶ, ಕೆಂಚನ ವೇಶದಲ್ಲಿ ಮೋಸಪಡಿಸಿರಬಹುದೇ ?........ಅದೇಗೆ ಸಾಧ್ಯ ?........ ಒಂದು ವೇಳೆ ಇವರಿಬ್ಬರು ಆ ವೇಷದಲ್ಲಿ ಮೋಸ ಪಡಿಸಿದ್ದು ನಿಜವಾಗಿದ್ದರೆ ಪ್ರತಿಯೊಂದು ವಿಷಯವನ್ನೂ ಕೂಲಂಕುಷವಾಗಿ ತಿಳಿಯುವೆನು. ಆಗ ಇವರ ಮೋಸವು ಹೊರಬೀಳುವುದು.' ಎಂಬುದಾಗಿ ನಿರ್ಧರ ಮಾಡಿಕೊಂಡನು.

ಮೂವರೂ ಪ್ರದೀಪನ ಮುಖವನ್ನೇ ನೋಡುತ್ತಿದ್ದರು.

ಪ್ರದೀಪನು ಯೋಚನೆಯನ್ನು ದೂರ ಮಾಡಿ—

"ಪತ್ತೇದಾರರೇ ! ಗಿರೀಶ, ಕೆಂಚನ ವೇಷವನ್ನು ತಾಳಿ ನೀವೇ ಬಂದಿದ್ದಿರಾ ?" ಎಂದು ಕೇಳಿದನು.

"ಹೌದು ! ನಾವೇ ಬಂದಿದ್ದೆವು. ಅದರಲ್ಲಿ ಸಂದೇಹಪಡಬೇಕಾದ ಕಾರಣವೇ ಬೇಡ."

—ಎಂದು ಪುರುಷೋತ್ತಮನು ಹೇಳಿದನು.

"ನೀವು ಹೇಳಿದ ಮಾತ್ರಕ್ಕೆ ನನ್ನ ಸಂದೇಹವು ನಿವೃತ್ತಿಯಾಗದು.

ಶೇಷಗಿರಿಯಂತೆ ಬೇರೆಯವರು ಮಾಡಿರಬಹುದು. ನೀವು ಹಿಂದಿನಂತೆ ನನ್ನ ಹಿಂದೆಯೇ ಇದ್ದು ಆ ಘಟನೆಯನ್ನು ನೋಡಿರಬಹುದು. ಅವರಿಬ್ಬರೂ ನನ್ನನ್ನು ಮರಕ್ಕೆ ಬಂಧಿಸಿ ಹೋದನಂತರ ನೀವು ಅವರಿಬ್ಬರನ್ನು ದಸ್ತಗಿರಿಮಾಡಿ, ಎಲ್ಲಿಯೋ ಅವರನ್ನು ಅಡಗಿಸಿ, ಆ ಕಾರ್ಯವನ್ನು ನಾವೇ ಮಾಡಿದ್ದೆಂದು ಹೇಳುತ್ತಿರಬಹುದು. ನೀವೇ ಆ ರೀತಿ ಮಾಡಿದಿರೆಂಬ ಬಗ್ಗೆ ನನಗೆ ನಂಬಿಕೆ ಸಾಲದು."

"ಆಧಾರಸಹಿತ ತೋರಿಸಿಕೊಟ್ಟರೆ ನಂಬುವಿರಾ?

"ನಂಬುವೆನು. ಅಷ್ಟು ಮಾತ್ರವಲ್ಲ, ನಾನು ಕೇಳುವ ಪ್ರಶ್ನೆಗಳಿಗೆ ಸಮರ್ಪಕವಾದ ಉತ್ತರವನ್ನೀಯಬೇಕು."

"ಹೇಳುವೆನು."

ನನಗೆ ಮೋಸಪಡಿಸಿದ ಬಗೆಯನ್ನು ಹೇಳಿ."

ರಾಜೇಂದ್ರಪುರದ ರೈಲ್ವೇ ನಿಲ್ದಾಣದಲ್ಲಿ ಪ್ರದೀಪನಿಗೆ ಕೆಂಚನು ಕಾಣಿಸಿ ಕೊಂಡಲಾಗಾಯ್ತು, ಆತನನ್ನು ಮರಕ್ಕೆ ಕಟ್ಟುವವರೆವಿಗೆ ನಡೆದ ಘಟನಾವಳಿ ಗಳನ್ನು ಪುರುಷೋತ್ತಮನು ಚಂದ್ರನಾಥನೊಡನೆ, ಪ್ರಾರಂಭದಲ್ಲಿ ಹೇಳಲು ಚಂದ್ರನಾಥನು ಪತ್ತೇದಾರರ ಯುಕ್ತಿ, ಚತುರತೆಯ ಅಮೋಘ ಕಾರ್ಯಕ್ಕೆ ಬೆರಗಾಗಿ, ಪ್ರದಿಪನಿಗೆ ನಾಚಿಕೆಯಾಗುವ ಉದ್ದೇಶ ಜೋರಾಗಿ ನಕ್ಕನು.

ಪ್ರದೀಪನಿಗೆ ತಲೆತಗ್ಗಿಸುವಂತಾಯಿತು.

ಪುರುಷೋತ್ತಮನು ಸಾವಧಾನವಾಗಿ ಪ್ರದೀಪನಿಗೆ ಮೋಸ ಪಡಿಸಿದ ಬಗೆಯನ್ನು ಹೇಳಲಾರಂಭ ಮಾಡಿದನು.

"ನಾವಿಬ್ಬರೂ ಶೇಷಗಿರಿಯನ್ನು ಹಿಡಿದಾದನಂತರ ಎಂದಿನಂತೆ ವೇಷಾಂ ತರದಿಂದ ನಿಮ್ಮ ಹಿಂದೆಯೇ ಇದ್ದೆವಾದರೂ, ಕೆಲವು ದಿನಗಳು ಇರಲಾಗಲಿಲ್ಲ."

ಪ್ರದೀಪನು ಗಂಭೀರನಾಗಿಯೇ—

"ಏಕೆ?" ಎಂದು ಕೇಳಿದನು.

"ನಿಮ್ಮ ಅತ್ತೇಮಾವರ ಊರಾವುದೆಂಬುದನ್ನು ಕೇಳಿ ತಿಳಿದು, ವೇಷಾಂ ತರದಿಂದ ಚಂಪಾಪುರಕ್ಕೆ ಹೋಗಿ ನಿಮ್ಮ ಮಾವನವರ ಮನೆಯ ಆಡಳಿತ ವನ್ನೆಲ್ಲಾ ಪರಿಶೀಲಿಸಿ ನೋಡಿಕೊಂಡು ಹಿಂದಿರುಗಿದೆವು."

"ಅಲ್ಲಿಗೆ ಹೋಗುವ ಉದ್ದೇಶವೇನು?"

"ನಿಮ್ಮ ಮಾವನವರ ವೇಷದಲ್ಲಿಯೇ ಆಗಲಿ, ಅಥವ ಅಲ್ಲಿರುವವರಲ್ಲಿ ಯಾರ ವೇಷದಿಂದಲೇ ಆಗಲಿ, ನಿಮಗೆ ಮೋಸಪಡಿಸಲು ಸಾಧ್ಯವಾಗುವುದೇ ಹೇಗೆಂಬ ಯೋಚನೆಯಿಂದ."

"ಆಮೇಲೆ ? "

"ಹಿಂದಿರುಗಿದನಂತರ ಎಂದಿನಂತೆ ನಿಮ್ಮ ಹಿಂದೆಯೇ ವೇಷಾಂತರದಿಂದ ಕಾವಲಾಗಿರಲು, ಆ ವೇಳೆಯಲ್ಲಿ ನೀವು ನಿಮ್ಮ ಪುತ್ರೋತ್ಸವದ ಸಂತೋಷ ಕೂಟವನ್ನಿಟ್ಟಿರಿ."

"ಆಗ ನೀವು ಅಲ್ಲಿಯೇ ಇದ್ದಿರಾ ? "

"ಹೌದು."

ಕೋಪಾವೇಷದಿಂದಿದ್ದ ಪ್ರದೀಪನಿಗೂ ಪತ್ತೇದಾರರ ಸಾಹಸವನು ಕೇಳುವ ಕುತೂಹಲವುಂಟಾಯಿತು.

"ಆಮೇಲೆ?"

"ನೀವು ಮಗನ ನಾಮಕರಣಕ್ಕೆ ಹೋಗಬಹುದೆಂದೂ. ಅವರಿಗೆ ಕಾಗದ ವನ್ನು ಬರೆಯಬಹುದೆಂದೂ ತಿಳಿದು, ನೀವು ನಿಮ್ಮ ಮಾವನವರಿಗೆ ಬರೆಯುವ ಕಾಗದವನ್ನು ಅಪಹರಿಸಬೇಕೆಂದು ಸಂಕಲ್ಪಮಾಡಿಕೊಂಡೆವು. ನಿಮ್ಮೊಡನೆ ವಿಶೇಷವಾಗಿ ಮಿತ್ರತ್ವದಿಂದ ಇದ್ದವರು ಬಳೇಅಂಗಡಿ ಬಾಳಪ್ಪನವರು. ಅವರ ಅಂಗಡಿ ಜವಾನನಾದ ನಾರಾಯಣನೊಡನೆ ನೀವು ಹಲವು ಸಾರಿ ಮಾತನಾಡಿ ದ್ದನ್ನೂ ನೋಡಿದ್ದೆನು."

"ಆಮೇಲೆ?"

"ನೀವು ನಿಮ್ಮ ಮಾವನವರಿಗೆ ಕಾಗದ ಬರೆಯುವುದನ್ನು ಕಿಟಕಿಯ ಮೂಲಕ ನೋಡಿದೆನು. ಬಹುಶಃ ನಿಮ್ಮ ಮಾವನವರಿಗೇ ಬರೆಯುತ್ತಿರಬಹು ದೆಂದು ಭಾವಿಸಿ, ಅದನ್ನಪಹರಿಸುವ ಯೋಚನೆಯಿಂದ, ತಕ್ಷಣವೇ ನಾವಿಳಿದು ಕೊಂಡಿದ್ದ ಮನೆಗೆ ಹೋಗಿ, ನಾರಾಯಣನಂತೆ ವೇಷವನ್ನು ಧರಿಸಿಕೊಂಡು, ಕೆಲವು ಕಾರ್ಡು, ಕವರುಗಳ ಮೇಲೆ ಯಾರಯಾರದೋ ವಿಳಾಸವನ್ನು ಬರೆದು, ಅವುಗಳನ್ನು ಕೈಲಿಡಿದುಕೊಂಡು ನಿಮ್ಮ ಮನೆಯ ಸಮೀಪಕ್ಕೆ ಬಂದು ನೀವು ಹೊರಗೆ ಬರುವುದನ್ನೇ ಕಾಯುತ್ತಿದ್ದೆನು. ಕೆಲಹೊತ್ತಿನಮೇಲೆ ನೀವು ಮನೆಯಿಂದ ಹೊರಗೆ ಬಂದಿರಿ. ನಾನು ನಿಮ್ಮನ್ನು ನೋಡುತ್ತಲೇ ಕಾರ್ಡು,

ಕವರುಗಳು ನಿಮಗೆ ಕಾಣುವಂತೆ ಹಿಡಿದು ನಿಮ್ಮ ಮುಂದೆಯೇ ಬರುತ್ತಿದ್ದೆನು. ನೀವು ನನ್ನನ್ನು ನೋಡಿ ನಾರಾಯಣನೆಂಬ ಭ್ರಾಂತಿಯಿಂದಲೇ ನನ್ನ ಕೈಗೆ ಕವರನ್ನು ಕೊಟ್ಟಿರಿ."

ಪುರುಷೋತ್ತಮನ ಆ ಒಂದು ಸಣ್ಣ ಯುಕ್ತಿಗೆ ಚಂದ್ರನಾಥ, ಪ್ರದೀಪ ರಿಬ್ಬರೂ ಬೆರಗಾದರು.

ಚಂದ್ರನಾಥನು ಮಧ್ಯೆ ಪ್ರವೇಶಿಸಿ—

"ಈತನು ನಾರಾಯಣನೇ ನೀವೆಂದು ತಿಳಿದು ಕವರನ್ನು ಕೊಟ್ಟನು. ಹಾಗೊಂದುವೇಳೆ ಕೊಡದೆ ಟಪಾಲುಪೆಟ್ಟಿಗೆಗೆ ಇವನೇ ಹಾಕಿದ್ದರೆ ಏನುಮಾಡು ತ್ತಿದ್ದಿರಿ?" ಎಂದು ಕೇಳಿದನು.

ಪುರುಷೋತ್ತಮನು ನಕ್ಕು—

"ಚಂಪಾಪುರಕ್ಕೆ ಹೋಗಿ ಶ್ರೀಕಂಠಯ್ಯನವರ ಆಳಿನ ವೇಷದಿಂದ ಟಪಾಲಿನವನನ್ನು ಸಂಧಿಸಿ ಆ ಕವರನ್ನು ಅಪಹರಿಸುತ್ತಿದ್ದೆನು" ಎಂದನು.

"ಆ ಸಮಯದಲ್ಲಿ ಶ್ರೀಕಂಠಯ್ಯನವರೇ ಅಲ್ಲಿದ್ದಿದ್ದರೆ ಹೇಗೆ ಅಪಹರಿಸು ತ್ತಿದ್ದಿರಿ?"

"ಚಂಪಾಪುರಕ್ಕೆ ನಾವಿಬ್ಬರೂ ಹೋಗುತ್ತಿದ್ದೆವಾದ್ದರಿಂದ ಟಪಾಲಿನವ ನನ್ನು ಸಂಧಿಸಿ ಆ ಕವರನ್ನು ಅಪಹರಿಸುತ್ತಿದ್ದೆನು" ಎಂದನು.

"ಆ ಸಮಯದಲ್ಲಿ ಶ್ರೀಕಂಠಯ್ಯನವರೇ ಅಲ್ಲಿದ್ದಿದ್ದರೆ, ಹೇಗೆ ಅಪಹರಿಸು ತ್ತಿದ್ದಿರಿ?"

"ಚಂಪಾಪುರಕ್ಕೆ ನಾವಿಬ್ಬರೂ ಹೋಗುತ್ತಿದ್ದೆವಾದ್ದರಿಂದ ಟಪಾಲಿನವ ನನ್ನು ಶ್ರೀಕಂಠಯ್ಯನವರೇ ಆಗಲಿ, ಅವರ ಕಡೆಯವರೇ ಆಗಲಿ, ಸಂಧಿಸದಂತೆ ಏರ್ಪಾಡು ಮಾಡುತ್ತಿದ್ದೆವು. ಹೇಗೆ ಮಾಡಬೇಕೆಂದು ನಮಗೆ ತಿಳಿದಿತ್ತಲ್ಲದೆ ಆ ವಿಷಯವಾಗಿ ನಾವು ಮಾತನಾಡಿಕೊಂಡೂ ಇದ್ದೆವು."

"ಸರಿ! ನಿಮ್ಮ ಯುಕ್ತಿಯನ್ನು ಕೇಳಬೇಕೇ? ಮುಂದೆ ಏನು ಮಾಡಿದಿ ರೆಂಬುವನ್ನು ಹೇಳಿ."

"ನಾರಾಯಣನ ವೇಷದಲ್ಲಿ ಕವರನ್ನು ಅಪಹರಿಸಿದನಂತರ ನಮ್ಮ ಮನೆಗೆ ಹೋಗಿ ಕವರನ್ನು ಬಿಚ್ಚಿ ಒಳಗಡೆಯಿದ್ದ ಕಾಗದವನ್ನು ನೋಡಲು,

ನಾನು ಊಹಿಸಿಕೊಂಡಂತೆಯೇ ಆಯಿತು. ಇವರು ಬುಧವಾರ ಬೆಳಿಗ್ಗೆ ಜಗ ದೀಶಪುರಕ್ಕೆ ಹೊರಡುವರೆಂದು ತಿಳಿಯಿತು."

ಪ್ರದೀಪನು ನಡುವೆ ಬಾಯಿಹಾಕಿ—

"ನಾನು ನಿಮ್ಮ ಕೈಗೆ ಕವರನ್ನಿತ್ತು, ನೀವು ಮುಂದೆ ಹೋದನಂತರ ನಿಮಗರಿವಾಗದಂತೆ ನಿಮ್ಮನ್ನು ಹಿಂಬಾಲಿಸಿ ಬಂದಿದ್ದರೆ, ನೀವು ನನ್ನ ಕೈಗೆ ಸಿಕ್ಕಿಬೀಳುತ್ತಿರಲಿಲ್ಲವೇ? ಆಗಲೇ ನಿಮ್ಮ ಮೋಸವು ಬಯಲಾಗುತ್ತಿತ್ತು. ನಾನು ಆ ಒಂದು ವಿಷಯದಲ್ಲಿ ಮೋಸಹೋದೆನು" ಎಂದನು.

ಪುರುಷೋತ್ತಮನು ಗಾಂಭೀರ್ಯದಿಂದಲೇ—

"ಒಂದು ವಿಷಯದಲ್ಲಿ ಏಕೆ ಎಲ್ಲಾ ವಿಷಯಗಳಲ್ಲಿಯೂ ಬೇಸ್ತು ಬಿದ್ದಿರುವಿರಿ. ನೀವು ನಾರಾಯಣನ ವೇಷದಲ್ಲಿದ್ದ ನನ್ನನ್ನು ಹಿಂಬಾಲಿಸಿ ಬಂದಿದ್ದರೂ ನಾನು ಸಿಗುತ್ತಿರಲಿಲ್ಲ" ಎಂದು ನುಡಿದನು.

"ಹೇಗೆ?"

"ನಾನು ಮುಂದೆ ಹೊರಟಿದ್ದರೂ, ನಿಮ್ಮ ಮನೆಯ ಬಳಿಯಲ್ಲಿ ರಾಮನಾಥನಿದ್ದೇ ಇದ್ದನು. ನೀವು ಆ ರೀತಿ ನನ್ನ ಹಿಂದೆಯೇ ಹೊರಟಿದ್ದರೆ, ನಿಮಗರಿವಾಗದಂತೆ ರಾಮನಾಥನು ನನಗೆ ತಿಳಿಸದಿರುತ್ತಿರಲಿಲ್ಲ. ಆಗ ನಾನು ಜಾಗರೂಕನಾಗಿ ನಿಮ್ಮ ಕವರನ್ನು ಹಸ್ತಚಮತ್ಕಾರದಿಂದ ನನ್ನ ಜೇಬಿನಲ್ಲಿಟ್ಟು ಕೊಂಡು ನನ್ನಲ್ಲಿದ್ದ ಕಾರ್ಡು ಕವರುಗಳನ್ನು ಟಪಾಲು ಪೆಟ್ಟಿಗೆಗೆ ಹಾಕುತ್ತಿದ್ದೆನು. ಆಗ ನಿಮ್ಮ ಸಂದೇಹವೂ ನಿವಾರಣೆಯಾಗುತ್ತಿತ್ತು. ನಮ್ಮ ಕಾರ್ಯವು ಎಂದಿನಂತೆಯೇ ಮುಂದುವರಿಯುತ್ತಿತ್ತು."

ಪುರುಷೋತ್ತಮನ ಊಹಾಪೋಹ ಅದ್ಭುತ ಜ್ಞಾನಪ್ರತಿಭೆಗೆ ಇನ್ಸ್ಪೆಕ್ಟರಿಬ್ಬರೂ ಬೆರಗಾದರು. ಆಗಲೇ ಪ್ರದೀಪನ ಮನದಲ್ಲಿ ಏನೋ ಒಂದು ಬಗೆಯ ಭೀತಿಯು ಕಾಣಿಸಿಕೊಂಡಿತು.

ಚಂದ್ರನಾಥನು ನಗುಮುಖದಿಂದ—

"ಮುಂದೆ ಏನಾಯಿತು?" ಎಂದು ಕೇಳಿದನು.

"ಚಂಪಾಪುರದಲ್ಲಿ ಶ್ರೀಕಂಠಯ್ಯನವರ ಬಳಿಯಲ್ಲಿ ಕೆಂಚನೆಂಬುವನು ಗಾಡಿ ಹೊಡೆಯುವುದನ್ನು ನೋಡಿದ್ದೆನು. ಅವನ ವೇಷಭೂಷಣಗಳನ್ನೂ,

ನಡೆನುಡಿಗಳನ್ನೂ ಸಹ ನೋಡಿದ್ದೆನಲ್ಲದೆ, ಆತನು ಎಷ್ಟು ವರ್ಷಗಳಿಂದ ಅವರಲ್ಲಿ ಕೆಲಸಕ್ಕಿರುವನೆಂಬುದನ್ನೂ ಕೇಳಿ ತಿಳಿದಿದ್ದೆನು."

"ಆತನ ವಿಷಯವನ್ನೇ ತಿಳಿಯಬೇಕೆಂಬ ನಿಯಮವೇನು ?"

"ಆತನೊಬ್ಬನ ವಿಷಯವನ್ನು ಮಾತ್ರವಲ್ಲ, ಇತರರ ವಿಷಯವನ್ನೂ ಸಹ ಕೇಳಿ ತಿಳಿದಿದ್ದೆವು."

"ಸರಿ ! ತಿಳಿಯಿತು. ಆಮೇಲೆ ?"

"ಒಬ್ಬರು ಕೆಂಚನ ವೇಷದಲ್ಲಿ ಮೋಸಪಡಿಸುವುದೆಂದು ನಿಷ್ಕರ್ಷೆಯಾಯಿತು. ಆ ವೇಷವನ್ನು ನಾನೇ ಧರಿಸಲು ಒಪ್ಪಂದವಾಯಿತು."

"ಆಮೇಲೆ ?"

"ಇನ್ನು ರಾಮನಾಥನು ಯಾವ ವೇಷವನ್ನು ಧರಿಸಿಕೊಳ್ಳಬೇಕೆಂಬುದರ ಬಗ್ಗೆ ಯೋಚನೆಯುಂಟಾಯಿತು."

"ತರುವಾಯ ?"

"ಹಾಗೇ ಯೋಚಿಸುತ್ತಿರಲು, ಸುಮಾರು ಒಂದು ವರ್ಷದ ಹಿಂದೆ, ಗಿರೀಶನೆಂಬ ಕಳ್ಳನು ರೈಲ್ವೆ ಗೂಡ್‌ಶೆಡ್ಡಿನಲ್ಲಿ ಆರು ಜೊತೆ ಸೈಕಲ್ ಫೆಡಲ್‌ಗಳನ್ನು ಕದ್ದು ಓಡಿಹೋಗುವಾಗ, ಪ್ರದೀಪನ ಕೈಗೆ ಸಿಕ್ಕಿಬಿದ್ದು ವಿಚಾರಣೆಗೆ ಗುರಿಯಾಗಿ, ಎರಡು ತಿಂಗಳು ಕಠಿಣಶಿಕ್ಷೆಗೆ ಗುರಿಯಾದನೆಂಬುದನ್ನು ಪತ್ರಿಕೆಯಲ್ಲಿ ಓದಿದ್ದೆನು. ಆ ಪತ್ರಿಕೆಯಲ್ಲಿ ಗಿರೀಶನ ಫೋಟೋವನ್ನೂ ಸಹ ಹಾಕಿದ್ದರು. ಆ ವಿಷಯವು ನೆನಪಿಗೆ ಬಂದು ರಾಮನಾಥನು ಗಿರೀಶನಂತೆ ವೇಷವನ್ನು ಧರಿಸಿ ಪ್ರದೀಪನ ಎದುರಿಗೆ ಕಾಣಬೇಕೆಂದು ಹೇಳಿ, ನಾವು ಹೇಗೆ ಅನುಸರಿಸಬೇಕೆಂಬುದನ್ನು ಆಗಲೇ ತೀರ್ಮಾನಮಾಡಿಕೊಂಡೆವು."

"ಗಿರೀಶನನ್ನು ನೀವು ನೋಡಿದ್ದಿರಾ ?"

"ಇಲ್ಲಾ ! ಫೋಟೋ ನೋಡಿದ್ದು ಎಷ್ಟೋ ಅಷ್ಟೆ."

"ಅದು ಸರಿ ! ಗಿರೀಶನು ಆ ವೇಳೆಯಲ್ಲಿ ಎಲ್ಲಿದ್ದನೆಂದು ನಿಮಗೆ ತಿಳಿಯದು. ಅಲ್ಲವೇ ?"

"ಹೌದು."

"ಆ ಗಿರೀಶನನ್ನೇ ಯಾವುದಾದರೊಂದು ತಪ್ಪಿನ ಮೇಲೆ ಇದೇ ಪ್ರದೀಪನು ದಸ್ತಗಿರಿ ಮಾಡಿ ವಿಚಾರಣೆಗೆ ಗುರಿಪಡಿಸಿದ್ದರೆ, ಆತನು ಶಿಕ್ಷೆಯನ್ನನು

ಭವಿಸಲು ಕಾರಾಗೃಹಕ್ಕೆ ಹೋಗುತ್ತಿದ್ದನು. ಹಾಗೆ ನಡೆದಿದ್ದು, ನಿಮ್ಮ ಮಿತ್ರನು ಗಿರೀಶನ ವೇಷದಲ್ಲಿ ಸಂಧಿಸಿದ್ದರೆ, ನಿಮ್ಮ ರಹಸ್ಯವು ಬಯಲಾಗುತ್ತಿರ ಲಿಲ್ಲವೇ ? "

ಪುರುಷೋತ್ತಮನು ನಕ್ಕು—

"ಹಾಗೆ ಹಿಡಿದಿದ್ದರೆ ನಮಗೆ ತಿಳಿಯುತ್ತಿರಲಿಲ್ಲವೇ ? ಒಂದು ವೇಳೆ ಗಿರೀ ಶನು ಜೈಲಿನಲ್ಲೇ ಇದ್ದರೂ, ಜೈಲಿನಿಂದ ತಪ್ಪಿಸಿಕೊಂಡು ಬಂದು ನನ್ನನ್ನು ಕೊಲ್ಲಲು ಇಲ್ಲಿ ಕಾಯುತ್ತಿದ್ದನೆಂದು ಈ ಪ್ರದೀಪನು ಊಹಿಸಿಕೊಳ್ಳದಿರುತ್ತಿರ ಲಿಲ್ಲ. ಗಿರೀಶನು ಈ ವೇಳೆಯಲ್ಲಿ ಎಲ್ಲಿಯೋ ಬಹುದೂರದಲ್ಲಿ ಇರಬಹುದೆಂದು ತಿಳಿದು, ಆವನ ವೇಷದಲ್ಲಿ ಮೋಸಪಡಿಸಲು ತಯಾರಾದೆವು" ಎಂದನು.

"ಗಿರೀಶನ ವಿಷಯವನ್ನು ಓದಿ, ನೀವು ಜ್ಞಾಪಕದಲ್ಲಿಟ್ಟುಕೊಂಡಿದ್ದರಿಂದ ಸರಿಹೋಯಿತು. ಇಲ್ಲದೇಹೋಗಿದ್ದರೆ ಏನು ಮಾಡುತ್ತಿದ್ದಿರಿ ? "

"ಇವರು ಎಷ್ಟು ಜನ ಕಳ್ಳರನ್ನು ಹಿಡಿದಿರುವರೆಂದೂ, ಅವರೆಲ್ಲಾ ಯಾರುಯಾರೆಂದೂ, ಅವರಿಗೆ ಎಷ್ಟೆಷ್ಟು ದಿನಗಳ ಶಿಕ್ಷೆಯಾಯಿತೆಂದೂ ನನಗೆ ತಿಳಿದಿದೆ. ಇವರು ಮಾತ್ರವೇ ಅಲ್ಲ, ಇತರ ಇನ್ಸ್‌ಪೆಕ್ಟರ್‌ಗಳು ಕಳ್ಳಕೊಲೆ ಗಾರರನ್ನು ಯಾವ ವೇಳೆಯಲ್ಲಿ ಹೇಗೆ ಹಿಡಿದರು? ಅವರಿಗೆ ಎಷ್ಟು ದಿನಗಳ ಶಿಕ್ಷೆಯಾಯಿತೆಂಬುದೂ ತಿಳಿದಿದೆ. ಗಿರೀಶನ ವೇಷದಲ್ಲಿ ಆಗದೆಹೋಗಿದ್ದರೆ ಬೇರೊಂದು ವೇಷದಲ್ಲಿಯಾದರೂ ಸರಿ, ಮೋಸಪಡಿಸದೆ ಬಿಡುತ್ತಿರಲಿಲ್ಲ."

ಪುರುಷೋತ್ತಮನ ಅಮೋಘ ಜ್ಞಾನಶಕ್ತಿಗೆ ಇನ್ಸ್‌ಪೆಕ್ಟರಿಬ್ಬರೂ ಬೆರ ಗಾದರು.

ಪ್ರದೀಪನ ಬಾಯಿಂದ ಮಾತುಗಳೇ ಹೊರಡದಂತಾಯಿತು. ಆತನು ಮೌನಮುದ್ರೆಯನ್ನು ವಹಿಸಿ ಪತ್ತೇದಾರರ ಸಾಹಸ ಚರಿತ್ರೆಯನ್ನು ಕೇಳು ತ್ತಿದ್ದನು.

"ಆಮೇಲೆ?"

—ಎಂದು ಚಂದ್ರನಾಥನು ಕೇಳಲು, ಪುರುಷೋತ್ತಮನು—

"ಬುಧವಾರ ಬೆಳಿಗ್ಗೆ ಇವರು ಹೊರಡುವರೆಂದು ತಿಳಿದುದರಿಂದ, ಮಂಗಳ ವಾರ ರಾತ್ರಿಯೇ ನಾವಿಬ್ಬರೂ ಜಗದೀಶಪುರದಿಂದ ರಾಜೇಂದ್ರಪುರಕ್ಕೆ ರೈಲಿ

ನಲ್ಲಿ ಹೋದೆವು. ಹೊರಡುವಾಗ ಇವರಿಂದ ಅಪಹರಿಸಿದ್ದ ಕವರನ್ನು ಆ ರಾತ್ರಿ ಟಪಾಲು ಪೆಟ್ಟಿಗೆಗೆ ಹಾಕಿದೆವು" ಎಂದು ಹೇಳಿದನು.

ತನಗೆ ಗುರುವಾರ ಕಾಗದ ಬಂದ ಕಾರಣವೇನೆಂದು ಪ್ರದೀಪನ ಮನಕ್ಕೆ ಆಗ ಹೊಳೆಯಿತು.

"ಮುಂದೆ ಏನು ಮಾಡಿದಿರಿ ?"

"ರೈಲಿನಲ್ಲಿರುವಾಗಲೇ, ರಾಜೇಂದ್ರಪುರವನ್ನು ತಲುಪಿದನಂತರ ಎತ್ತಿನ ಗಾಡಿಗಾಗಿ ಏನು ಮಾಡಬೇಕೆಂಬುದರ ಬಗ್ಗೆ ದೊಡ್ಡ ಯೋಚನೆಯುಂಟಾಯಿತು. ಆ ಊರಿನಲ್ಲಿ ಕೃಷ್ಣರಾಯರೆಂಬುವರು ನನ್ನ ಪೂರ್ವ ಸ್ನೇಹಿತರಾಗಿದ್ದರು. ನನ್ನ ಯೋಚನೆಗೆ ಅವರ ನೆನಪು ಬಂದು ಅವರ ಸಹಾಯದಿಂದ ಎತ್ತಿನ ಗಾಡಿಯನ್ನು ಸಂಪಾದಿಸಬೇಕೆಂದುಕೊಂಡೆನು.

"ಆಮೇಲೆ?"

"ರಾಜೇಂದ್ರಪುರವನ್ನು ತಲುಪಿದನಂತರ ಕೃಷ್ಣರಾಯರೆಲ್ಲಿರುವರೆಂಬುದನ್ನು ಪತ್ತೇಮಾಡಿ ಹಿಡಿದು, ಅವರಲ್ಲಿಗೆ ಹೋಗಿ ನಾನಾರೆಂಬುದನ್ನು ತಿಳಿಸಿ ಒಂದು ದಿನದ ಮಟ್ಟಿಗೆ ಒಂದು ಎತ್ತಿನ ಗಾಡಿಯು ಅತ್ಯಾವಶ್ಯಕವಾಗಿ ಬೇಕಾಗಿರುವುದರಿಂದ ಎಲ್ಲಿಂದಲಾದರೂ ಕೊಡಿಸಬೇಕೆನ್ನಲು, ಅವರು ಬಹುದಿನಗಳ ನಂತರ ನಮ್ಮನ್ನು ಕಂಡ ಪ್ರಯುಕ್ತ, ಆದರದಿಂದ ಸ್ವಾಗತಿಸಿ ತಮ್ಮ ಬಳಿಯಲ್ಲಿಯೇ ಇದ್ದ ಸ್ವಂತಗಾಡಿಯನ್ನು ನಮ್ಮ ಸ್ವಾಧೀನಕ್ಕೆ ಕೊಟ್ಟರು. ದೈವಾನುಗ್ರಹದಿಂದ ನಮ್ಮ ಕಾರ್ಯವು ಸುಲಭವಾಗಿ ನೆರವೇರಿದುದಕ್ಕಾಗಿ ನಮಗೆ ಅತ್ಯಾನಂದವಾಯಿತು."

"ಕೃಷ್ಣರಾಯರು ನಿಮ್ಮ ಹಳೆಯಸ್ನೇಹಿತರಾಗಿದ್ದು, ರಾಜೇಂದ್ರಪುರದಲ್ಲಿದ್ದುದರಿಂದ ಸರಿಹೋಯಿತು. ಇಲ್ಲದೇಹೋಗಿದ್ದರೆ ಏನುಮಾಡುತ್ತಿದ್ದಿರಿ ?"

"ಯಾವರೀತಿಯಿಂದಲಾದರೂ, ಯಾರನ್ನಾದರೂ ಹಿಡಿದು ಗಾಡಿಯನ್ನು ಸಂಪಾದಿಸದೆ ಬಿಡುತ್ತಿರಲಿಲ್ಲ. ಹೋದಮೇಲೆ ನಿರಾಶರಾಗುವುದೆಂದರೇನು ? ಆ ರೀತಿ ನಿರಾಶರಾಗಿ ಹಿಂದಿರುಗುವುದು ಈ ಜನ್ಮದಲ್ಲಿಯೇ ಸಾಧ್ಯವಿಲ್ಲ."

"ಸರಿ ! ತಿಳಿಯಿತು. ಮುಂದೆ ಹೇಳಿ."

"ನಾನು ಕೆಂಚನಂತೆ ವೇಷವನ್ನು ಧರಿಸಿಕೊಂಡು ಗಾಡಿಯನ್ನು ರೈಲ್ವೇ ಸ್ಟೇಷನ್ನಿನ ಬಳಿಯಲ್ಲಿ ಬಿಟ್ಟು ರೈಲು ಬರುವುದನ್ನೇ ಎದುರುನೋಡುತ್ತಿದ್ದೆನು."

"ಆಮೇಲೆ?"

"ನಿಯಮಿತವೇಳೆಗೆ ಅಂದರೆ ಆ ದಿನ ರಾತ್ರಿ ಹನ್ನೊಂದು ಘಂಟೆಗೆ ರೈಲು ಬರಲಿಲ್ಲ. ಇಂಜಿನ್ ಕೆಟ್ಟು ರೈಲು ರಾಮನಪುರದ ರೈಲ್ವೇ ನಿಲ್ದಾಣದ ಸಮೀಪ ದಲ್ಲಿರುವುದೆಂದೂ, ರಾಜೇಂದ್ರಪುರಕ್ಕೆ ಬರಲು ತಡವಾಗುವುದೆಂದೂ ತಿಳಿಯಿ ತಲ್ಲದೆ, ರೈಲು ಒಂಭೈನೂರ ಅರವತ್ತು ನಿಮಿಷಗಳು ತಡವಾಗಿ ಬರುವುದೆಂಬ ಬೋರ್ಡನ್ನೂ ತಗಲಿಹಾಕಿದರು."

"ಅನಂತರ ?"

"ಗುರುವಾರ ಮಧ್ಯಾಹ್ನ ಮೂರುಘಂಟೆಯುವರೆವಿಗೆ ರೈಲಿಗಾಗಿ ಕಾಯ ಬೇಕಾಯಿತು."

"ಆಮೇಲೆ ?"

"ರೈಲು ಬರುತ್ತಲೇ ರಾಮನಾಥನಿಗೆ ಐದು ಮೈಲಿಗಳ ದೂರದಲ್ಲಿ ಗಾಡಿ ಯನ್ನು ಅಡ್ಡಹಾಕುವಂತೆ ಹೇಳಿಕಳುಹಿಸಿದೆನು. ಈತನು ಆಗ ನಡೆದುಕೊಳ್ಳುವ ವಿಧಾನವನ್ನೂ ಸಹ ಹೇಳಿಕೊಟ್ಟದ್ದೆನು."

"ಅನಂತರ ?"

"ನಾನು ಕೆಂಚನ ವೇಷದಲ್ಲಿಯೇ ಇವರನ್ನು ಕಂಡು ಮಾತನಾಡಿಸಿ ದೆನು, ಇವರಿಂದ ನನ್ನನ್ನು ಗುರುತಿಸಲಾಗಲಿಲ್ಲ. ನಿಜವಾದ ಕೆಂಚನೆಂದೇ ತಿಳಿದರು."

"ಮುಂದೆ ಏನಾಯಿತೇಳಿ ?"

ಕೆಂಚನ ವೇಷದಲ್ಲಿ ಪುರುಷೋತ್ತಮನು ಪ್ರದೀಪನನ್ನು ಕಂಡಲಾ ಗಾಯ್ತು, ಗಿರೀಶ ನಾಮಧೇಯದ ರಾಮನಾಥನು ಆತನನ್ನು ಮರಕ್ಕೆ ಕಟ್ಟಿ, ಗಾಡಿಯೊಡನೆ ಹಿಂದಿರುಗುವವರೆವಿಗೆ ನಡೆದ ಘಟನಾವಳಿಯನ್ನೆಲ್ಲಾ ಚಾಚೂ ತಪ್ಪದೆ ಪುರುಷೋತ್ತಮನು ಹೇಳಲು, ಚಂದ್ರನಾಥನು ದಿಗ್ಭ್ರಾಂತನಂತಾ ದನು.

ಇನ್ನು ತಾನು ಇವರಿಗೆ ದಾಸನಾಗಬೇಕಾದ್ದು ನಿರ್ಧರವೆಂಬ ಭಾವ ನೆಯು ಪ್ರದೀಪನ ಮನಕ್ಕೆ ಹೊಳೆಯಿತು.

ಪತ್ತೇದಾರರ ವಿಚಿತ್ರ, ಸಾಹಸ, ಚಮತ್ಕಾರದ ಕಥೆಯನ್ನು ಕೇಳುತ್ತಾ ಹೋದಹಾಗೆ, ಮುಂದಿನ ವಿಷಯವನ್ನು ಕೇಳುವ ಕುತೂಹಲವು ಚಂದ್ರನಾಥನ

ಮನದಲ್ಲುದ್ಭವವಾಗುತ್ತಿತ್ತು. ತನಗೆ ಅನುಮಾನ ಬಂದ ಕಡೆಗಳಲ್ಲಿ ಪ್ರಶ್ನೆಗಳನ್ನು ಹಾಕಿ, ಸಮರ್ಪಕವಾದ ಉತ್ತರಗಳನ್ನು ಪಡೆಯುತ್ತಿದ್ದನು.

"ಪತ್ತೇದಾರರೇ! ನೀವಿಬ್ಬರೂ ಸೇರಿ ಗಿರೀಶ, ಕೆಂಚನ ವೇಷದಲ್ಲಿ ಈತನಿಗೆ ಮೋಸಗೊಳಿಸಿ ಮರಕ್ಕೆ ಕಟ್ಟಿಹಾಕಿದ್ದೇನೋ ಸರಿ. ಈತನು ಆಯುಧ ರಹಿತನಾದ್ದರಿಂದ ನಿಮ್ಮ ಕಾರ್ಯಕ್ಕೆ ಯಾವಬಗೆಯಲ್ಲಿಯೂ ವಿಘ್ನವುಂಟಾಗಲಿಲ್ಲ. ಈತನು ತನ್ನ ಸಂಗಡ ಪಿಸ್ತೂಲನ್ನಿಟ್ಟುಕೊಂಡಿದ್ದು, ರಾಮನಾಥನು ಗಿರೀಶನ ವೇಶದಲ್ಲಿ ನಿಮಗೆ ಭಯಪಡಿಸುತ್ತಿದ್ದಾಗ ಈತನು ಗಾಡಿಯ ಒಳಗಿನಿಂದಲೇ ಪಿಸ್ತೂಲನ್ನು ತೋರಿಸಿದ್ದರೆ ನೀವೇನು ಮಾಡುತ್ತಿದ್ದಿರಿ?"

—ಎಂದು ಚಂದ್ರನಾಥನು ಕೇಳಲು ಪುರುಷೋತ್ತಮನು ಮುಗುಳುನಕ್ಕು—

"ನಾನು ಇವರನ್ನು ರಾಜೇಂದ್ರಪುರದ ರೈಲ್ವೇ ನಿಲ್ದಾಣದಲ್ಲಿ ಸಂಧಿಸಿದ ಒಂದೆರಡು ಘಂಟೆಯೊಳಗಾಗಿಯೇ ಇವರು ನಿರಾಯುಧರೆಂದು ಕಂಡುಕೊಂಡೆನು. ಹಾಗೊಂದು ವೇಳೆ ಪಿಸ್ತೂಲನ್ನು ತಂದಿದ್ದರೆ, ರಾಮನಾಥನನ್ನು ಸಂಧಿಸುವುದರೊಳಗಾಗಿ, ಯಾವ ರೀತಿಯಿಂದಲಾದರೂ ಪಿಸ್ತೂಲನ್ನು ಎಗರಿಸಬಿಡುತ್ತಿದ್ದೆನು." ಎಂದು ಹೇಳಿದನು.

"ಅಪಹರಿಸಲು ಸಾಧ್ಯವಾಗದೆ ಹೋಗಿದ್ದರೆ?"

"ಅಸಾಧ್ಯವೆಂಬುವ ಮಾತೇ ಹೇಳಬೇಡಿ. ಅಷ್ಟು ಕಾರ್ಯ ಸಾಧಿಸಿದ ಮೇಲೆ ಪಿಸ್ತೂಲನ್ನು ಅಪಹರಿಸಲು ಸಾಧ್ಯವಾಗುತ್ತಿರಲಿಲ್ಲವೇ? ಏನಾದರೊಂದು ಯುಕ್ತಿಯನ್ನು ಹೂಡಿ ಅಪಹರಿಸದೆ ಬಿಡುತ್ತಿರಲಿಲ್ಲ."

"ಅದು ಸರಿ! ನಿಮ್ಮ ಕಾರ್ಯಕಲಾಪವೆಲ್ಲಾ ಮುಗಿದಂತಾಯಿತು. ನಿಮ್ಮ ಪ್ರತಿಜ್ಞೆಯೂ ಗೆದ್ದಂತಾಯಿತು. ಆದರೇ! ನೀವು ಈತನನ್ನು ಆ ಅರಣ್ಯದಲ್ಲಿ, ಆ ವೇಳೆಯಲ್ಲಿ ಮರಕ್ಕೆ ಕಟ್ಟಿ ಹಿಂದಿರುಗುವುದು ನ್ಯಾಯವೇ?"

ಪುರುಷೋತ್ತಮನು ಗಾಂಭೀರ್ಯದಿಂದ—

"ಹಾಗೆ ಬಿಟ್ಟುಬಂದರೆ ಇವರ ಅವಸ್ಥೆಯು ಕೊನೆಯಾಗುವುದೆಂದು ನಿಮಗೆ ತಿಳಿಯದೇ? ಗಾಡಿಯು ಎರಡು ಮೈಲಿಗಳ ದೂರ ಬಂದನಂತರ ನಾವಿಬ್ಬರೂ ವೇಷವನ್ನು ಬದಲಾಯಿಸಿಕೊಂಡೆವು. ಇವರ ಗಂಟುಮೂಟೆಯನ್ನು ನಮ್ಮ ಬಟ್ಟೆಯಲ್ಲಿ ಕಟ್ಟಿದೆವು. ಬಳಿಕ ರಾಮನಾಥನಿಗೆ ಗಾಡಿಯನ್ನು ಹೊಡೆದು

ಕೊಂಡು ಹೋಗುವಂತೆ ಹೇಳಿ, ನಾನು ಹಿಂದಿರುಗಿ, ಒಳರಸ್ತೆಯ ಮಾರ್ಗ ವಾಗಿ ಚಂಪಾಪುರದ ಕಡೆಗೆ ಬಂದು, ರಾಜೇಂದ್ರಪುರಕ್ಕೆ ಹೋಗುವವನಂತೆ ನಟಿಸಿ ವೇಗವಾಗಿ ಹೋಗುತ್ತಿದ್ದೆನು. ಆಗ ಇವರು ನನ್ನನ್ನು ನೋಡಿ ಕೂಗಿ ಕರೆದರು" ಎಂದು ಹೇಳಿದನು.

ಪ್ರದೀಪನಿಗೂ ಸಹ ಆ ಮಾತನ್ನು ಕೇಳಿ ಆಶ್ಚರ್ಯವಾಯಿತು. ಇವರು ಸಾಮಾನ್ಯರಲ್ಲವೆಂದೂ ಇವರೊಡನೆ ಹಠಮಾಡಿ ತಾನು ಕೆಟ್ಟುಹೋದೆನೆಂದೂ ಭಾವಿಸಿಕೊಂಡನು.

"ನೀವೇ ಈತನ ಬಂಧನವನ್ನು ಬಿಚ್ಚಿದಿರಾ ?"

ಪುರುಷೋತ್ತಮನು ಹೌದೆಂದು ತಲೆಯಾಡಿಸಿ, ಆಗ ತನಗೂ ಪ್ರದೀಪ ನಿಗೂ ನಡೆದ ಸಂಭಾಷಣೆಯನ್ನು ಹೇಳಿ—

"ಈತನ ಬಂಧನವನ್ನು ಬಿಚ್ಚಿದ್ದು ಮಾತ್ರವಲ್ಲ. ಹಗ್ಗವನ್ನೂ ಸಹ ತೆಗೆ ದುಕೊಂಡು ಬಂದೆನು" ಎಂದು ಹೇಳಿದನು.

"ಈತನು ಚಂಪಾಪುರಕ್ಕೆ ಹೊರಟಿದ್ದರಿಂದ ಸರಿಹೋಯಿತು. ರಾಜೇಂದ್ರ ಪುರದ ಕಡೆಗೆ ಹೊರಟಿದ್ದರೆ ನಿಮ್ಮ ರಹಸ್ಯವು ಬಯಲಾಗುತ್ತಿರಲಿಲ್ಲವೇ ? ಮಾರ್ಗದಲ್ಲಿಯೆ ಗಾಡಿಯನ್ನು ಹಿಡಿಯಬಹುದಿತ್ತು."

"ಹಾಗೆಂದಿಗೂ ಸಾಧ್ಯವಾಗುತ್ತಿರಲಿಲ್ಲ. ಇವರು ಚಂಪಾಪುರಕ್ಕೆ ಹೋಗದೆ, ನನ್ನ ಜೊತೆಯಲ್ಲಿ ಹೊರಡಲು ತಯಾರಾಗಿದ್ದಿದ್ದರೆ, ಏನಾದ ರೊಂದು ಬಗೆಯ ಯುಕ್ತಿಯನ್ನು ಪ್ರಯೋಗಿಸಿ ಚಂಪಾಪುರಕ್ಕೇ ಹೋಗುವಂತೆ ಮಾಡುತ್ತಿದ್ದೆನಲ್ಲದೆ, ನನ್ನ ಜೊತೆಯಲ್ಲಿ ಬರಲು ಅವಕಾಶಕೊಡುತ್ತಿರಲಿಲ್ಲ."

"ಸರಿ ! ತಿಳಿಯಿತು. ಮುಂದೆ ಏನು ಮಾಡಿದಿರಿ ?"

"ನಾವು ರಾಜೇಂದ್ರಪುರವನ್ನು ತಲುಪಿದನಂತರ ಗಾಡಿಯನ್ನು ಕೃಷ್ಣರಾ ಯರ ವಶಕ್ಕೆ ಒಪ್ಪಿಸಿ, ಆ ರಾತ್ರಿಯೇ ಕಾಂಚೀನಗರಕ್ಕೆ ಹಿಂದಿರುಗಿದೆವು."

"ಕೃಷ್ಣರಾಯರು ಗಾಡಿಯ ವಿಷಯವಾಗಿ ನಿಮ್ಮೊಡನೆ ಯಾವ ಮಾತನ್ನೂ ಆಡಲಿಲ್ಲವೇ ?"

"ಕೇಳಿದರಾದರೂ ಅವರಿಗೆ ಅನುಮಾನವಾಗದ ರೀತಿ ಸಮರ್ಪಕವಾದ ಉತ್ತರವನ್ನಿತ್ತೆನು."

"ಆಮೇಲೆ ?"

"ಈ ನಗರಕ್ಕೆ ಬಂದನಂತರ ಆ ವಿಷಯುವಾಗಿ ಏನೂ ಅರಿಯದವರಂತೆಯೇ ಕಾಲಕಳೆದುಕೊಂಡಿದ್ದೆವು. ಗಿರೀಶ, ಕೆಂಚನೇ ಮೋಸಪಡಿಸಿದರೆಂದೂ ಆ ವಿಷಯವು ಯಾರಿಗೂ ತಿಳಿಯದೆಂದೂ, ನಮ್ಮಿಂದ ಏನು ಕಾರ್ಯವೂ ಜರುಗಲಿಲ್ಲವೆಂದೂ ಭಾವಿಸಿ ಇವರು ನಿಮಗೆ ಕಾಗದ ಬರೆದಿರುವರು. ಮುಂದೆ ನಡೆದುದು ನಿಮಗೆ ತಿಳಿದೇ ಇದೆ."

ಪತ್ತೇದಾರರ ಸಾಹಸ ಕಥೆಯು ಮುಗಿಯಿತು.

ಯಾವ ವಿಷಯುವಾಗಿಯೇ ಆಗಲಿ, ಚರ್ಚೆಮಾಡುವ ಅವಕಾಶವು ಪ್ರದೀಪನಿಗೆ ದೊರೆಯದೆ ಹೋಯಿತು.

ಚಂದ್ರನಾಥನು ಪ್ರದೀಪನ ಮುಖವನ್ನು ನೋಡಿ—

"ಪ್ರದೀಪಾ ! ವಿಷಯವೆಲ್ಲವನ್ನೂ ಕೇಳಿ ತಿಳಿದಿರುವೆ. ಇನ್ನು ನಿನ್ನ ಅಭಿಪ್ರಾಯವೇನಿದೆ ? ಹೇಳು ? ಎಂದು ಕೇಳಿದನು.

ಪ್ರದೀಪನು ಮಾತನಾಡುವ ಮೊದಲೇ ರಾಮನಾಥನು—

"ಆತನು ಹೇಳುವುದೇನಿದೆ ? ಇನ್ನು ತನ್ನ ಕೆಲಸಕ್ಕೆ ರಾಜೀನಾಮೆಯನ್ನಿತ್ತು ನಮಗೆ ದಾಸನಾಗುವುದೊಂದೇ ಬಾಕಿ" ಎಂದು ಗಂಭೀರವಾಕ್ಕಿನಿಂದ ನುಡಿದನು.

ಪ್ರದೀಪನ ಶರೀರವಾದ್ಯಂತವೂ ಗಡಗಡನೆ ನಡುಗಿಹೋಯಿತು.

ಪುರುಷೋತ್ತಮನು ಪ್ರದೀಪನ ಮುಖವನ್ನು ನೋಡುತ್ತಾ—

"ಇನ್ನೂ ಏನು ಆಧಾರಬೇಕು, ಹೇಳಿ ?" ಎಂದು ಕೇಳಿದನು.

ಪ್ರದೀಪನ ನಾಲಿಗೆಯೇ ಹೊರಳಲಿಲ್ಲ.

ಚಂದ್ರನಾಥನು ಗಾಂಭೀರ್ಯದಿಂದ—

"ಪ್ರದೀಪಾ ! ಏಕೆ ಮೌನವಾಗಿ ಕುಳಿತುಕೊಂಡೆ ? ಮಾತನಾಡು. ನಿನ್ನ ದುರಹಂಕಾರದ ಗರ್ವವೆಲ್ಲಾ ಏನಾಯಿತು ? ನಾನಾದರೋ ಹೇಡಿ, ಸೋಮಾರಿ, ಕೈಲಾಗದವನು. ನೀನು ಮಹಾ ಪರಾಕ್ರಮಶಾಲಿಯಾಗಿದ್ದು ಏಕೆ ಮೌನವಾಗಿರುವೆ ? ನಾನೇನೋ ಇವರ ಹೊಗಳುಭಟ್ಟ. ಈಗ ಯಾರನ್ನು ಹೊಗಳಬೇಕು ? ಹೇಳು ? ಅವರನ್ನು ಹೊಗಳುವೆನು" ಎಂದನು.

ರಾಮನಾಥನು ಎದ್ದುನಿಂತು,

"ಇನ್ನು ಆ ಮಾತುಗಳಿಂದ ಪ್ರಯೋಜನವಿಲ್ಲ. ಪ್ರದೀಪಾ ! ಮೊದಲು

ನಿನ್ನ ಕೆಲಸಕ್ಕೆ ರಾಜೀನಾಮೆಯನ್ನು ಬರೆ. ಬಳಿಕ ಏನುಮಾಡಬೇಕೆಂಬು ದನ್ನು ಹೇಳುವೆವು" ಎಂದು ನುಡಿದು ಕುಳಿತನು.

ಪುರುಷೋತ್ತಮನು ಚಂದ್ರನಾಥನಿಗೆ—

"ನೀವು ನಮ್ಮಿಬ್ಬರಿಗೂ ರಾಜಿ ಮಾಡಿಸಿ. ಅದಕ್ಕಾಗಿಯೇ ನಿಮ್ಮ ಮೂಲಕ ಕರೆಯಿಸಿಕೊಂಡಿದ್ದು" ಎಂದು ಹೇಳಿದನು.

ಚಂದ್ರನಾಥನು ಪ್ರದೀಪನ ಮುಖವನ್ನು ನೋಡಲು, ಆತನು ತಗ್ಗಿಸಿದ ತಲೆಯನ್ನು ಮೇಲಕ್ಕೆತ್ತಲಿಲ್ಲ. ಪತ್ತೇದಾರರ ಒಂದೊಂದು ಮಾತೂ ಅವನ ಹೃದಯವನ್ನು ಶೂಲದಿಂದ ಇರಿದಂತಾಗುತ್ತಿತ್ತು. ಆತನ ಪ್ರತಿಯೊಂದು ಯೋಚನೆಯು ತಲೆಕೆಳಗಾಯಿತು.

ಚಂದ್ರನಾಥನು ಪ್ರದೀಪನಿಗೆ—

"ಪ್ರದೀಪಾ ! ಅತ್ತೆಗೊಂದುಕಾಲವಾದರೆ ಸೊಸೆಗೊಂದುಕಾಲವಲ್ಲವೇ ? ನೀನು ಇನ್ನೂ ಅತ್ತೆಯ ಸ್ಥಾನಕ್ಕೆ ಬರದೆ ಸೊಸೆಯ ಸ್ಥಾನದಲ್ಲಿಯೇ ಇರುವೆ ಯಲ್ಲ. ಯಾರು ರಾಜೀನಾಮೆ ಕೊಡಬೇಕು ? ಯಾರು ದಾಸರಾಗಬೇಕೆಂಬು ದನ್ನು ಹೇಳು ? ನಾನು ಅನುಭವವಿಲ್ಲದವನು. ನಿನ್ನ ಯೋಗ್ಯತೆಯ ಮಟ್ಟಕ್ಕೆ ಬರಬೇಕಾದರೆ ಹತ್ತುವರ್ಷ ನಿನ್ನ ಜೊತೆಯಲ್ಲಿರಬೇಕಲ್ಲವೇ ? ನೀನೇ ಹೇಳಿ ದಂತೆ ನನ್ನ ನಿನ್ನ ಯೋಗ್ಯತೆಗೆ ಅಜಗಜಾಂತರ ವ್ಯತ್ಯಾಸವಿದೆ. ನೀನು ಮಹಾ ಮೇಧಾವಿಯಾದ್ದರಿಂದ ನಿನಗೆ ಮೋಸಪಡಿಸಲು ಇವರಿಂದಾಗದೆ ನಿನ್ನೊಡನೆ ರಾಜಿ ಮಾಡಿಕೊಳ್ಳಲು ನನ್ನ ಮೂಲಕ ನಿನ್ನನ್ನು ಕರೆಯಿಸಿಕೊಂಡಿರುವರಲ್ಲವೇ? ಏನಾದರೂ ಹೇಳುವುದಿದ್ದರೆ ಇಲ್ಲಿಯೇ ಹೇಳು" ಎಂದನು.

ಯಾರ ಪ್ರಶ್ನೆಗೂ ಪ್ರದೀಪನ ಉತ್ತರವೇ ಇಲ್ಲ. ಮೌನವೆಂಬ ಮಹಾ ವ್ರತವು ಅವನನ್ನು ಆವರಿಸಿಕೊಂಡಿತ್ತು.

ಪುನಃ ಚಂದ್ರನಾಥನು—

"ನೀನಾಡಿದ ಪ್ರತಿಯೊಂದು ಮಾತುಗಳನ್ನು ಜ್ಞಾಪಿಸಿಕೊಂಡರೆ ನಿನ್ನನ್ನು ಜೀವಸಹಿತ ಸುಟ್ಟುಬಿಡೋಣವೇ ಎನ್ನುವಷ್ಟು ಕೋಪ ಬರುತ್ತದೆ. ಆದುದಾ ಯಿತು, ಇನ್ನು ಮಾತಿನಂತೆ ನಡೆಯಬೇಕಾದ್ದು ನಿನ್ನ ಕರ್ತವ್ಯ" ಎಂದನು.

ಅದಕ್ಕೂ ಪ್ರದೀಪನ ಉತ್ತರವಿಲ್ಲ.

ಪುರುಷೋತ್ತಮನು ಪ್ರದೀಪನಿಗೆ—

"ನಿಮ್ಮ ಅಹಂಕಾರವು ಅಡಗಿತೇ ? ಅಥವಾ ಇನ್ನೂ ಅಡಗಬೇಕಾಗಿದೆಯೋ ?" ಎಂದು ಕೇಳಿದನು.

ಪ್ರದೀಪನು ಆಗ ತಲೆಯೆತ್ತಿ—

"ಪತ್ತೇದಾರರೇ ! ನಿಜವಾಗಿಯೂ ನನ್ನ ಗರ್ವವು ಅಡಗಿತು. ನಿಮ್ಮ ವಿಷಯದಲ್ಲಿ ತುಚ್ಛವಾಗಿ ನಡೆದುಕೊಂಡಿದ್ದೆನು. ಈಗ ನಿಮ್ಮ ಸಾಮರ್ಥ್ಯದ ಅರಿವಾಯಿತು. ನಿಮ್ಮಿಬ್ಬರ ಯುಕ್ತಿಚತುರತೆಗಳನ್ನು ಕಣ್ಣಾರೆ ಕಂಡಂತಾಯಿತು. ಖಂಡಿತವಾಗಿ ನಿಮ್ಮ ಯುಕ್ತಿ, ಚತುರತೆಯ ಮುಂದೆ ನನ್ನ ತಂತ್ರೋಪಾಯಗಳು ಲೆಕ್ಕಕ್ಕೇ ಬಾರದು. ನೀವು ನನ್ನನ್ನು ಪಂಥದಲ್ಲಿ ಸೋಲಿಸಿರುವಿರಿ. ನಾನು ಒಪ್ಪಿಕೊಳ್ಳುವೆನು" ಎಂದನು.

ಪುರುಷೋತ್ತಮನು ಮಾತನಾಡುವ ಮೊದಲೇ ರಾಮನಾಥನು—

"ಹಾಗಿದ್ದಮೇಲೆ ಇನ್ನು ತಡವೇಕೆ ? ಪಂಥದಲ್ಲಿ ಸೋತಪ್ರಕಾರ ನಡೆಯಬೇಕಾದ್ದು ನಿನ್ನ ಕರ್ತವ್ಯ" ಎಂದನು.

ರಾಮನಾಥನೊಡನೆ ವಾದಕ್ಕೆ ನಿಂತರೆ ತನ್ನ ಆಟವು ನಡೆಯದೆಂದು ಪ್ರದೀಪನು ಯೋಚಿಸಿ, ಆತನ ಮಾತಿಗೆ ಉತ್ತರವೀಯದೆ ಪುರುಷೋತ್ತಮನ ಮುಖವನ್ನು ನೋಡಿದನು.

ಚಂದ್ರನಾಥನು ನಗುತ್ತಾ—

"ಪ್ರದೀಪಾ ! ಎಂತಹ ಮಾತನಾಡಿಬಿಟ್ಟೆ. ನಾನೇನೋ ಹೊಗಳುಭಟ್ಟನಾಗಿರುವೆನು. ನೀನೂ ಸಹ ನನ್ನ ಹಾಗೆ ಹೊಗಳುವೆಯೇಕೆ ? ತೆಗಳಬೇಕಾದ್ದು ನಿನ್ನ ಕರ್ತವ್ಯ. ನಾನು ನಿನ್ನ ಗರಡಿಯಲ್ಲಿ ಕಲಿಯಬೇಕಾಗಿದೆ. ಹೀಗಿರುವಾಗ ನೀನೇಕೆ ನನ್ನ ಅಖಾಡಾಕ್ಕೆ ಇಳಿದೆ" ಎಂದು ಕೇಳಿದನು.

ತಾನು ಹಿಂದೆ ಚಂದ್ರನಾಥನಿಗೆ ಆಡಿದ ಪ್ರತಿಯೊಂದು ವಿಷಯವೂ ನೆನಪಿಗೆ ಬಂದು ಪ್ರದೀಪನಿಗೆ ಪಶ್ಚಾತ್ತಾಪವಾಯಿತು.

ಇನ್ನು ಕೆಲಸಕ್ಕೆ ಬಾರದ ಮಾತಿನಿಂದ ಪ್ರಯೋಜನವಿಲ್ಲವೆಂದರಿತ ಪುರುಷೋತ್ತಮನು ಪ್ರದೀಪನಿಗೆ—

"ನೀವು ನನ್ನ ಗರ್ವವಡಗಿತೆಂದು ಹೇಳಿದ್ದೇ ಸಾಕು. ನನಗೆ ಸಂತೋಷವಾಯಿತು. ನಮಗೆ ನಿಮ್ಮ ಮೇಲೆ ಕೋಪವಿಲ್ಲ. ಆದರೆ ಚಂದ್ರನಾಥನಿಗೆ ಆಡಿದ ಮಾತುಗಳನ್ನು ಜ್ಞಾಪಿಸಿಕೊಂಡರೆ ಪ್ರತಿವಾಕ್ಯಕ್ಕೂ ರಕ್ತವು ಬಿಸಿಯಾ

ಗುತ್ತದೆ. ಇನ್ನು ಕಳೆದುದನ್ನು ಕೆದಕಿ ಫಲವಿಲ್ಲ. ನಾವು ಪಂಥದಲ್ಲಿ ಸೋತಿದ್ದರೆ ಏನೇನು ಆಟವಾಡುತ್ತಿದ್ದಿರೋ ದೇವರೇ ಬಲ್ಲ. ನಾವು ಗೆದ್ದ ಪ್ರಯುಕ್ತ ನೀವು ತಲೆ ತಗ್ಗಿಸುವಂತಾಯಿತು. ಆದರೆ ನಾವು ಗೆದ್ದೆವೆಂದು ನಿಮ್ಮಹಾಗೆ ಹುಚ್ಚಾಪಟ್ಟೆ ಮಾತನಾಡುವುದಿಲ್ಲ. ನೀವು ಮಾತಿನ ಪ್ರಕಾರ ನಮ್ಮ ದಾಸರಾಗುವುದು ಬೇಡ. ಇನ್ನು ಮುಂದಾದರೂ ಗರ್ವವನ್ನು ದೂರಮಾಡಿ ಶಾಂತಿಯನ್ನು ತಂದುಕೊಳ್ಳಿ. ಗರ್ವದಿಂದ ರಾಜಾಧಿರಾಜರೂ ಷಟ್ಚಕ್ರವರ್ತಿಗಳೂ ಹಾಳಾಗಿರುವರು. ನೂರು ಅಶ್ವಮೇಧಯಾಗಗಳನ್ನು ಮಾಡಿ ಇಂದ್ರಪದವಿಯನ್ನು ಪಡೆದಿದ್ದರೂ, ಗರ್ವದಿಂದ ಮತ್ತನಾಗಿ ಋಷಿಯನ್ನು ಒದೆದು, ಋಷಿಯ ಶಾಪಕ್ಕೆ ಗುರಿಯಾಗಿ, ಅಜಗರನಾದ ನಹುಷನೇ ಉದಾಹರಣೆಯಾಗಿರುವನು. ಚಂದ್ರನಾಥನಿಗೆ ವಿವೇಕವಿಲ್ಲವೆನ್ನುವಿರಿ. ಈಗ ನಿಮ್ಮ ವಿಷಯವಾಗಿ ನನಗೆ ಹಾಕಿದ ಪ್ರಶ್ನೆಗಳನ್ನು ನೀವೇ ಕಿವಿಯಾರೆ ಕೇಳಿದಿರಿ. ಆ ಒಂದು ವಿಷಯದಲ್ಲಿ ನಿಮಗಿಂತಲೂ ಈತನು ಜ್ಞಾನಿಯೆಂದು ಹೇಳಬಲ್ಲೆನು. ನಮ್ಮ ಬಿರುದಾವಳಿಗಳನ್ನು ಹೊಗಳಲು ಇವರನ್ನು ನಿಯಮಿಸಿಕೊಂಡಿಲ್ಲ. ತಿಳಿಯಿತೇ?" ಎಂದು ಹೇಳಿದನು.

ಪುರುಷೋತ್ತಮನ ನೀತಿಯುತವಾದ ಮಾತುಗಳನ್ನು ಕೇಳಿ ಪ್ರದೀಪನಿಗೆ ಆನಂದವಾಯಿತು. ಬಂಧಿಯಾಗಿ ಸೆರೆಮನೆಯಲ್ಲಿ ಕೂಡಿದ್ದ ಸಿಂಹನನ್ನು ಸ್ವೇಚ್ಛೆಯಾಗಿ ತಿರುಗಾಡಲು ಹೊರಗೆ ಬಿಟ್ಟಂತಾಯಿತು. ತಾನು ಇವರಿಗೆ ದಾಸನಾಗಬೇಕಾದ ಪ್ರಮೇಯವಿಲ್ಲವೆಂದುಕೊಂಡನು.

ಉಕ್ಕಿಬಂದ ಆನಂದವನ್ನು ತಡೆಯಲಾರದೆ ಎದ್ದು ಪುರುಷೋತ್ತಮನನ್ನು ಆಲಿಂಗನ ಮಾಡಿಕೊಂಡನು. ಅವನ ಕಣ್ಣುಗಳಿಂದ ಆನಂದಭಾಷ್ಪಗಳುದುರಿದುವು.

ಬಳಿಕ ರಾಮನಾಥನಿಗೂ ಹಸ್ತಲಾಘವವನ್ನಿತ್ತು ಆತನನ್ನೂ ತಬ್ಬಿಕೊಂಡನು.

ಪುರುಷೋತ್ತಮನ ಮಾತಿನಿಂದ ಅರ್ಧ ಇಳಿದಿದ್ದ ರಾಮನಾಥನ ಸಿಟ್ಟು, ಪ್ರದೀಪನ ಆಲಿಂಗನದಿಂದ ಸಂಪೂರ್ಣವಾಗಿ ದೂರವಾಯಿತು.

ಇನ್ನು ಮುಂದಾದರೂ ಗರ್ವದಿಂದ ಮತ್ತನಾಗಬೇಡವೆಂದು ನಗುಮುಖದಿಂದಲೇ ಪ್ರದೀಪನಿಗೆ ಹೇಳಿದನು.

ಚಂದ್ರನಾಥನು ನಗುತ್ತಾ—

"ಪ್ರದೀಪಾ! ಈಗ ಯಾರು, ಯಾರ ಗರಡಿಗೆ ಸೇರಿದರು ?" ಎಂದು ಕೇಳಿದನು.

ಪ್ರದೀಪನೂ ನಕ್ಕು—

"ನಾನೇ ನಿನ್ನ ಗರಡಿಗೆ ಸೇರಿದೆ" ಎಂದು ಹೇಳಿ ಆತನಿಗೆ ಹಸ್ತಲಾಘವ ವನ್ನಿತ್ತನು.

ಪ್ರದೀಪನು ನಗೆಯಾಡಿದುದನ್ನು ಅವರು ಮೂವರೂ ನೋಡಿದ್ದು ಅದೇ ಮೊದಲು.

ಪ್ರದೀಪನು ತನ್ನ ಕಥೆಯನ್ನೆಲ್ಲಾ ಅವರೊಡನೆ ಹೇಳಲು, ಅವರು ಮೂವರೂ ವಿಸ್ಮಿತರಾದರು.

ಬಳಿಕ ರಾಮನಾಥನು ಒಳಗೆ ಹೋಗಿ ತಾವು ಗಿರೀಶ, ಕೆಂಚರ ವೇಷ ದಲ್ಲಿ ಅಪಹರಿಸಿದ್ದ ಪ್ರದೀಪನ ವಸ್ತುಗಳೆಲ್ಲವನ್ನೂ ತಂದು ಆತನ ಮುಂದಿಟ್ಟನು.

ಪ್ರದೀಪನನ್ನು ಮರಕ್ಕೆ ಕಟ್ಟಿದ್ದ ಹಗ್ಗವೂ, ಅವರು ಆಗ ಧರಿಸಿದ್ದ ಉಡುಪುಗಳೂ ಅಲ್ಲಿಯೇ ಇದ್ದುವು.

ಪ್ರದೀಪನಿಗೆ ಅವುಗಳನ್ನು ನೋಡಿ ನಾಚಿಕೆಯಾದಂತಾಯಿತು.

ಪುರುಷೋತ್ತಮನೊಡನೆ ಆತನು—

"ಪತ್ತೇದಾರರೇ! ನನ್ನ ಗರ್ವವು ನಿಮ್ಮ ದೆಶೆಯಿಂದ ಸಂಪೂರ್ಣವಾಗಿ ಅಡಗಿತು. ಆದರೆ ಒಂದುವಿಷಯ, ಏನೆಂದರೆ–ಈ ಘಟನೆಯನ್ನು ಯಾರಲ್ಲಿಯೂ ತಿಳಿಸಬೇಡಿರೆಂದು ವಿನಯದಿಂದ ನಿಮ್ಮಲ್ಲಿ ಪ್ರಾರ್ಥಿಸುವೆನು" ಎಂದನು.

ಅವನ ಮಾತಿಗೆ ಮೂವರೂ ನಕ್ಕರು.

ಪುರುಷೋತ್ತಮನು ಆಗಲೆಂಬಂತೆ ತಲೆಯಾಡಿಸಲು, ಪ್ರದೀಪನಿಗೆ ಆನಂದವಾಯಿತು.

ಪ್ರದೀಪನು ಪತ್ತೇದಾರರ ಅತಿಥಿಯಾಗಿ ಎರಡು ದಿನಗಳಿದ್ದು, ಬಳಿಕ ಅವರಿಂದ ಬೀಳ್ಕೊಂಡು ಜಗದೀಶಪುರಕ್ಕೆ ಹಿಂದಿರುಗಿದನು.

**'ಪ್ರದೀಪನ ಪರಾಭವ'**ವನ್ನು ಪತ್ತೇದಾರರು ಯಾರಲ್ಲಿಯೂ ಹೇಳ ಲಿಲ್ಲವಾದರೂ, ಕಾದಂಬರಿಯ ಮೂಲಕ ಸಾಹಿತ್ಯಪ್ರೇಮಿಗಳಿಗೆಲ್ಲಾ ತಿಳಿಯು ವಂತಾಯಿತು.

**ಸಂಪೂರ್ಣಂ.**